**"22ಎ. ವಂಶಪಾರಂಪರ್ಯ ನ್ಯಾಸಧಾರಿಗಳು ನಿರ್ವಹಿಸುವ ಅಧಿಸೂಚಿತ ಸಂಸ್ಥೆಗಳ ಸಂದರ್ಭದಲ್ಲಿ ಅಧ್ಯಕ್ಷರ ಚುನಾವಣೆಗೆ ಸಂಬಂಧಿಸಿದ ಕಾರ್ಯವಿಧಾನ.–** ಎಲ್ಲಿ ಒಬ್ಬನಿಗಿಂತ ಹೆಚ್ಚು ವಂಶಪಾರಂಪರ್ಯ ನ್ಯಾಸಧಾರಿಗಳಿಂದ ಅಥವಾ ಸಂಸ್ಥಾಪಕ ನ್ಯಾಸಧಾರಿಯಿಂದ ಅಧಿಸೂಚಿತ ಸಂಸ್ಥೆಯನ್ನು ನಿರ್ವಹಿಸಲಾಗುತ್ತಿದೆಯೋ ಅಲ್ಲಿ ಅಧ್ಯಕ್ಷನನ್ನು ಮುಂದಿನ ಕಾರ್ಯವಿಧಾನಕ್ಕನುಸಾರವಾಗಿ ಚುನಾಯಿಸತಕ್ಕದ್ದು ಎಂದರೆ:–

(1) ಅಧ್ಯಕ್ಷರ ಚುನಾವಣೆಯನ್ನು ಈ ಸಂಬಂಧದಲ್ಲಿ ಅಧಿಕೃತನಾದ ಅಧಿಕಾರಿಯು ನಡೆಸುವ ವಿಶೇಷ ಸಭೆಯಲ್ಲಿ ನಡೆಸತಕ್ಕದ್ದು ಮತ್ತು ಇದು ಕೈಗಳನ್ನು ಎತ್ತುವ ಮೂಲಕವೇ ನಡೆಯತಕ್ಕದ್ದು. ಮತದಾನದ ಫಲಿತಾಂಶವು ಸಮಾನವಾಗಿದ್ದಲ್ಲಿ ಅಧ್ಯಕ್ಷೀಯ ಅಧಿಕಾರಿಯು ಅದೃಷ್ಟ ಚೀಟಿ ಎತ್ತುವುದರ ಮೂಲಕ ಅಧ್ಯಕ್ಷರನ್ನು ಆಯ್ಕೆ ಮಾಡಲು ವ್ಯವಸ್ಥೆ ಮಾಡತಕ್ಕದ್ದು. ಯಾವ ವ್ಯಕ್ತಿಯ ಹೆಸರನ್ನು ಅದೃಷ್ಟ ಚೀಟಿಯ ಮೂಲಕ ಆರಿಸಲಾಗುವುದೋ ಆ ವ್ಯಕ್ತಿಯು ಅಧ್ಯಕ್ಷನಾಗಿ ಆಯ್ಕೆಯಾದನೆಂದು ಭಾವಿಸತಕ್ಕದ್ದು, ಆದಾಗ್ಯೂ, ಈ ಸಂಬಂಧದಲ್ಲಿ ಅಧಿಕೃತವಾದ ಅಧಿಕಾರಿಯು ಮತನೀಡುವ ಅಧಿಕಾರವನ್ನು ಹೊಂದಿರತಕ್ಕದ್ದಲ್ಲ.

(2) (1)ನೇ ಉಪ ನಿಯಮದಡಿಯಲ್ಲಿ ಚುನಾಯಿತನಾದ ಅಧ್ಯಕ್ಷನು ವಂಶಪಾರಂಪರ್ಯ ನ್ಯಾಸಧಾರಿಯಾಗಿರುವುದು ಕೊನೆಗೊಳ್ಳದ ಹೊರತು, ವಂಶಪಾರಂಪರ್ಯ ನ್ಯಾಸಧಾರಿಗಳು ನಿರ್ಣಯಿಸಬಹುದಾದಂತಹ ಅಥವಾ ಮೂರು ವರ್ಷಗಳ ಅವಧಿಯ ಪದವಿಯನ್ನು ಹೊಂದಿರತಕ್ಕದ್ದು.

(3) ಅಧ್ಯಕ್ಷರ ರಾಜೀನಾಮೆಯು ಲಿಖಿತದಲ್ಲಿರತಕ್ಕದ್ದು ಹಾಗೂ ರಾಜೀನಾಮೆಯು ವಂಶಪಾರಂಪರ್ಯ ನ್ಯಾಸಧಾರಿಗಳ ಸಭೆಯಲ್ಲಿ ಅಂಗೀಕರಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**22ಬಿ. ಉಪ ಆಯುಕ್ತರು ವಿಚಾರಣೆಯನ್ನು ನಡೆಸುವುದಕ್ಕಾಗಿ ಕಾರ್ಯವಿಧಾನ.–** (1) 25(ಬಿ) ಪ್ರಕರಣದ ಅಡಿಯಲ್ಲಿ, 6ನೇ ಉಪ ಪ್ರಕರಣದ (vii)ನೇ ಖಂಡವನ್ನು ಹೊರತುಪಡಿಸಿ, ಯಾವುದೇ ಅಧಿಸೂಚಿತ ಸಂಸ್ಥೆ ಅಥವಾ ದತ್ತಿಯ ಸಂಬಂಧದಲ್ಲಿನ ಯಾವುದೇ ವಿವಾದ ಅಥವಾ ವಿಷಯಕ್ಕೆ ಸಂಬಂಧಿಸಿದಂತೆ ಒಂದು ವಿಚಾರಣೆಯನ್ನು ನಡೆಸಲು ಉಪ ಆಯುಕ್ತರು ಬಯಸಿದಾಗಲೆಲ್ಲಾ, ಅವರು ವಿವಾದದ ಸ್ವರೂಪ ಮತ್ತು ಅಹವಾಲನ್ನು ಹೇಳಿಕೊಳ್ಳುವ ವಿವಾದಿತ ವಿಷಯದ ಸಂಬಂಧದಲ್ಲಿ ಆಸಕ್ತ ವ್ಯಕ್ತಿಗಳಿಗೆ/ ಭಕ್ತಾದಿಗಳಿಗೆ ಯಾವುದೇ ಆಕ್ಷೇಪಣೆ ಅಥವಾ ಸಲಹೆಯನ್ನು ದಾಖಲು ಮಾಡಲು ಅನುಮತಿಸುವ ಮತ್ತು ನಡವಳಿಗಳಲ್ಲಿ ಭಾಗವಹಿಸುವ ಬಗ್ಗೆ ವಿಚಾರಣಾ ದಿನಾಂಕದ ನೋಟೀಸನ್ನು ನೀಡತಕ್ಕದ್ದು ಹಾಗೂ ಅಂತಹ ನೋಟೀಸನ್ನು,

(1) ಸಂಬಂಧಪಟ್ಟ ಸಂಸ್ಥೆಯ;

(2) ಸಂಬಂಧಪಟ್ಟ ಸ್ಥಳೀಯ ಸಂಸ್ಥೆಯ;

(3) ಸಂಬಂಧಪಟ್ಟ ತಾಲ್ಲೂಕು ಕಛೇರಿಯ;

(4) ಸಹಾಯಕ ಆಯುಕ್ತರುಗಳ ಕಛೇರಿ ಅಥವಾ ಸಂದರ್ಭಾನುಸಾರವಾಗಿ ಕಂದಾಯ ಉಪವಿಭಾಗೀಯ ಕಛೇರಿಯ;

(5) ಉಪ ಆಯುಕ್ತರ ಕಛೇರಿಯ;

– ಸೂಚನಾ ಫಲಕದ ಮೇಲೆ ಅಂಟಿಸುವುದರ ಮೂಲಕ ಪ್ರಕಟಿಸತಕ್ಕದ್ದು.

(2) ಸಂಬಂಧಪಟ್ಟವರಿಂದ ನೋಟೀಸನ್ನು ಅಂಟಿಸುವ ಮೂಲಕ ಪ್ರಕಟಿಸಲಾಗಿದೆ ಎಂಬುದಕ್ಕೆ ಅಗತ್ಯವಾದ ಪ್ರಮಾಣ ಪತ್ರವನ್ನು ಪಡೆದು ದಾಖಲೆಯ ಉದ್ದೇಶಕ್ಕಾಗಿ ಇಡತಕ್ಕದ್ದು.

**16. 31ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 31ನೇ ನಿಯಮದಲ್ಲಿ,–

(1) (1)ನೇ ಉಪನಿಯಮದಲ್ಲಿ **"**ಇಪ್ಪತ್ತು ವರ್ಷಗಳಾಗಿರತಕ್ಕದ್ದು**"**, ಎಂಬ ಪದಗಳಿಗೆ **"**ಮೂವತ್ತು ವರ್ಷಗಳಾಗಿರತಕ್ಕದ್ದು**"**, ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(2) (3)ನೇ ಉಪನಿಯಮದಲ್ಲಿ **"ಶೇಕಡಾ ಐದರಷ್ಟು"** ಎಂಬ ಪದಗಳಿಗೆ **"ಶೇಕಡಾ ಹತ್ತರಷ್ಟು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(3) (17)ನೇ ಉಪ ನಿಯಮದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"**(18) ಗುತ್ತಿಗೆ ಅವಧಿಯು ಮುಕ್ತಾಯವಾದ ತಕ್ಷಣವೇ, ಗುತ್ತಿಗೆದಾರನು, ಗುತ್ತಿಗೆ ಪಡೆದ ಸ್ವತ್ತಿನ ಸ್ವಾಧೀನತೆಯನ್ನು ಆಧ್ಯರ್ಪಣೆ ಮಾಡಲು ವಿಫಲನಾದಲ್ಲಿ, ಆವರಣಗಳ ಬಳಕೆಗಾಗಿ ಮತ್ತು ಅನಧಿಕೃತ ಸ್ವಾಧೀನಾನುಭವದ ನಷ್ಟವನ್ನು ತುಂಬಿಕೊಡಲು ಹೊಣೆಗಾರನಾಗಿರತಕ್ಕದ್ದು. ಮೊದಲನೇ ತ್ರೈಮಾಸಿಕದವರೆಗೆ (ಮೂರು ತಿಂಗಳುಗಳು) ಪ್ರತಿ ತಿಂಗಳಿಗೆ ತುಂಬಿಕೊಡಬೇಕಾದ ನಷ್ಟವು ಗುತ್ತಿಗೆ ಅವಧಿಯು ಮುಕ್ತಾಯವಾಗುವುದಕ್ಕೆ ನಿಕಟಪೂರ್ವದಲ್ಲಿ ಸಂದಾಯ ಮಾಡಿದ ಮಾಸಿಕ ಬಾಡಿಗೆಯ ಮೊಬಲಗಿನ ಎರಡರಷ್ಟು ದರದಲ್ಲಿ ಇರತಕ್ಕದ್ದು. ಅದಾದ ತರುವಾಯ, ನಷ್ಟವು ಹಿಂದಿನ ತ್ರೈಮಾಸಿಕ ಅವಧಿಯಲ್ಲಿ ಸಂದಾಯ ಮಾಡಿದ ನಷ್ಟದ ಎರಡರಷ್ಟು ಹೆಚ್ಚಾಗತಕ್ಕದ್ದು. ಸ್ವತ್ತಿನ ಸ್ವಾಧೀನತೆಯನ್ನು ಅಧ್ಯರ್ಪಣೆ ಮಾಡುವವರೆಗೂ ಮೇಲೆ ಹೇಳಿದ ನಷ್ಟವು ಸಂದಾಯವಾಗತಕ್ಕದ್ದು**"**.

**17. 32ಎ. ಹೊಸ ನಿಯಮದ ಸೇರ್ಪಡೆ.–** ಸದರಿ ನಿಯಮಗಳ 32ನೇ ನಿಯಮದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"32ಎ.ದೇವಸ್ಥಾನಗಳನ್ನು ನೋಂದಣಿ ಮಾಡುವುದಕ್ಕೆ ಕಾರ್ಯವಿಧಾನ.–**(1) 53ನೇ ಪ್ರಕರಣದ ಅಡಿಯಲ್ಲಿ ದೇವಸ್ಥಾನಗಳನ್ನು ನೋಂದಣಿ ಮಾಡುವುದಕ್ಕಾಗಿ ಪ್ರತಿಯೊಂದು ಅರ್ಜಿಯು ಈ ಮುಂದಿನ ವಿವರಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಸಂಸ್ಥಾಪಕರು ಯಾರಾದರೂ ಇದ್ದಲ್ಲಿ ಅವರ ವಿವರಗಳೊಂದಿಗೆ ದೇವಸ್ಥಾನದ ಹೆಸರು

(ii) ದೇವಸ್ಥಾನವು ಹೊಂದಿರುವ ಹೂಡಿಕೆಗಳು ಒಳಗೊಂಡಂತೆ ಚರ ಮತ್ತು ಸ್ಥಿರ ಸ್ವತ್ತುಗಳ ಪಟ್ಟಿ;

(iii) ಸಂಸ್ಥೆಗೆ ಸೇರಿದ ಮತ್ತು ಸಂಸ್ಥೆಯು ನಿರ್ವಹಿಸುವ ಉಪ–ದೇವರುಗಳ ಮತ್ತು ಉಪ ದೇವಸ್ಥಾನಗಳ ಹೆಸರು ಮತ್ತು ದೈನಂದಿನ, ನಿಯತಕಾಲಿಕ ಮತ್ತು ವಾರ್ಷಿಕ ಸೇವೆಗಳು ಮತ್ತು ಧಾರ್ಮಿಕ ಕ್ರಿಯೆಗಳಿಗೆ ಆಗುವ ವೆಚ್ಚದ ವಿವರಗಳು;

(iv) ದೇವಸ್ಥಾನಕ್ಕೆ ಸೇರಿದ ಮತ್ತು ಅದು ನಿರ್ವಹಿಸುತ್ತಿರುವ ಧ್ಯೇಯೋದ್ದೇಶಗಳ ಪಟ್ಟಿ ಮತ್ತು ಅವುಗಳ ಮೇಲ್ವಿಚಾರಣೆ ಮತ್ತು ನಿರ್ವಹಣೆಯ ಅಥವಾ ಪಾವತಿಸಬೇಕಾದ ಮೊಬಲಗು ಯಾವುದಾದರೂ ಇದ್ದಲ್ಲಿ ಅವುಗಳ ವಿವರಗಳು;

(v) ದೇವಸ್ಥಾನಕ್ಕೆ ಸಂಬಂಧಿಸಿದ ಯಾವುದೇ ಇತರ ವಿವರಗಳು;

(vi) 53ನೇ ಪ್ರಕರಣದ ಅಡಿಯಲ್ಲಿ ದೇವಸ್ಥಾನವನ್ನು ನೋಂದಣಿ ಮಾಡಲು ದೇವಸ್ಥಾನದ ಯಾವೊಬ್ಬ ನ್ಯಾಸಧಾರಿ ಅಥವಾ ಯಾವೊಬ್ಬ ವ್ಯಕ್ತಿಯು ವಿಫಲನಾದಲ್ಲಿ, ಸಂಬಂಧಪಟ್ಟ ಸಹಾಯಕ ಆಯುಕ್ತನು, ನ್ಯಾಸಧಾರಿಗೆ ಅಥವಾ ದೇವಸ್ಥಾನದ ಕಾರ್ಯಭಾರದಲ್ಲಿರುವ ಯಾವೊಬ್ಬ ಇತರ ವ್ಯಕ್ತಿಗೆ ದೇವಸ್ಥಾನವನ್ನು ಏಕೆ ನೋಂದಣಿ ಮಾಡಬಾರದು ಮತ್ತು ಆತನಿಂದ ನೋಂದಣಿಯ ವೆಚ್ಚವನ್ನು ಏಕೆ ವಸೂಲು ಮಾಡಬಾರದು ಎಂದು ಕಾರಣ ಕೇಳುವ ನೋಟೀಸನ್ನು ನೀಡತಕ್ಕದ್ದು. ನೋಟೀಸನ್ನು ನೀಡಿದ್ದಾಗ್ಯೂ, ನ್ಯಾಸಧಾರಿ ಅಥವಾ ದೇವಸ್ಥಾನದ ಕಾರ್ಯಭಾರದಲ್ಲಿರುವ ವ್ಯಕ್ತಿಯು ನೋಂದಣಿಗಾಗಿ ಅರ್ಜಿಯನ್ನು ದಾಖಲು ಮಾಡಲು ವಿಫಲನಾದಲ್ಲಿ ಸಹಾಯಕ ಆಯುಕ್ತನು, ದೇವಸ್ಥಾನದ ಸ್ಥಳ ಪರಿಶೀಲನೆ ನಡೆಸಿ ಮತ್ತು ಮಹಜರು ಮಾಡುವ ಮೂಲಕ ನೋಂದಣಿಗಾಗಿ ದೇವಸ್ಥಾನದ ವಸ್ತುಗಳನ್ನು ಮತ್ತು ವಿವರಗಳನ್ನು ಸಂಗ್ರಹಿಸುವಂತೆ ಮಾಡತಕ್ಕದ್ದು ಹಾಗೂ ತದನಂತರ 53ನೇ ಪ್ರಕರಣದ ಅಡಿಯಲ್ಲಿ ಅಗತ್ಯಪಡಿಸಲಾದಂತೆ ದೇವಸ್ಥಾನವನ್ನು ನೋಂದಣಿ ಮಾಡತಕ್ಕದ್ದು, ನೋಂದಣಿ ವೆಚ್ಚವನ್ನು ಹಾಗೂ ಒಂದು ಸಾವಿರ ರೂಪಾಯಿಗಳಿಗೆ ಮೀರದ ದಂಡದೊಂದಿಗೆ ದೇವಸ್ಥಾನದ ನಿಧಿಯಿಂದ ಪಾವತಿಸುವಂತೆ ಆದೇಶಿಸಿ ನೋಂದಣಿ ಪ್ರಮಾಣ ಪತ್ರವನ್ನು ನೀಡತಕ್ಕದ್ದು

(vii) ನ್ಯಾಸಧಾರಿ ಅಥವಾ ದೇವಸ್ಥಾನದ ಕಾರ್ಯಭಾರದಲ್ಲಿರುವ ವ್ಯಕ್ತಿಯು, ಸಹಾಯಕ ಆಯುಕ್ತನು ವಿಧಿಸಿದ ವೆಚ್ಚವನ್ನು ಸಂದಾಯ ಮಾಡಲು ವಿಫಲನಾದಲ್ಲಿ ಅದನ್ನು ಭೂ ಕಂದಾಯ ಬಾಕಿಯಂತೆ ವಸೂಲು ಮಾಡತಕ್ಕದ್ದು.

(viii) ನ್ಯಾಸಧಾರಿ ಅಥವಾ ದೇವಸ್ಥಾನದ ಕಾರ್ಯಭಾರದಲ್ಲಿರುವ ವ್ಯಕ್ತಿಯು ನೋಂದಣಿ ಪ್ರಮಾಣ ಪತ್ರವನ್ನು ಸ್ವೀಕರಿಸಲು ತಿರಸ್ಕರಿಸಿದಲ್ಲಿ, ಅದನ್ನು ದೇವಸ್ಥಾನದ ಮುಂದಿನ ಬಾಗಿಲಿನ ಮೇಲೆ ಅಂಟಿಸುವುದರ ಮೂಲಕ ಜಾರಿ ಮಾಡತಕ್ಕದ್ದು.

(ix) ನ್ಯಾಸಧಾರಿ ಅಥವಾ ದೇವಸ್ಥಾನದ ಕಾರ್ಯಭಾರದಲ್ಲಿರುವ ಯಾವೊಬ್ಬ ಇತರ ವ್ಯಕ್ತಿಯು, (1)ನೇ ಉಪ ಪ್ರಕರಣದ ಅಡಿಯಲ್ಲಿ ದೇವಸ್ಥಾನವನ್ನು ನೋಂದಣಿ ಮಾಡಿಕೊಳ್ಳಲು ವಿಫಲನಾದಲ್ಲಿ, ಸಹಾಯಕ ಆಯುಕ್ತನು ದೇವಸ್ಥಾನವು ಕ್ರಮಬದ್ಧವಾದ ಆಡಳಿತಕ್ಕೊಳಪಟ್ಟಿದೆಯೇ ಅಥವಾ ದೇವಸ್ಥಾನದ ಸ್ವತ್ತು ಮತ್ತು ವರಮಾನದ ಬಗ್ಗೆ ಕ್ರಮಬದ್ಧವಾದ ಲೆಕ್ಕಪತ್ರಗಳನ್ನು ಇಡಲಾಗಿದೆಯೇ? ಅಥವಾ ಇಲ್ಲವೇ? ಎಂಬುದನ್ನು ಖಾತರಿಪಡಿಸಿಕೊಳ್ಳಲು ಅಧಿನಿಯಮದ 42ನೇ ಪ್ರಕರಣದಡಿಯಲ್ಲಿ ವ್ಯವಹರಣೆಗಳನ್ನು ಪ್ರಾರಂಭಿಸಲು ಆಯುಕ್ತನಿಗೆ ಒಂದು ವರದಿಯನ್ನು ಕಳುಹಿಸಬಹುದು."

**18. 33ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 33ನೇ ನಿಯಮದಲ್ಲಿ,–

**(1)** (1)ನೇ ಉಪನಿಯಮಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ಅಧಿಸೂಚಿತ ಸಂಸ್ಥೆಯಲ್ಲಿ ಕಾರ್ಯನಿರ್ವಾಹಕ ಅಧಿಕಾರಿಯನ್ನು ನೇಮಕ ಮಾಡದಿರುವ ಸಂದರ್ಭದಲ್ಲಿ ಸಂಸ್ಥೆಯ ಲೆಕ್ಕಪತ್ರಗಳನ್ನು ಕ್ರಮಬದ್ಧವಾಗಿ ಇಡುವುದಕ್ಕೆ ವ್ಯವಸ್ಥಾಪನಾ ಸಮಿತಿಯ ಅಧ್ಯಕ್ಷರು ಜವಾಬ್ದಾರರಾಗಿರತಕ್ಕದ್ದು. ಈ ನಿಯಮಗಳಿಗೆ ಲಗತ್ತಿಸಲಾದ ನಮೂನೆಗಳಲ್ಲಿ ಲೆಕ್ಕಪತ್ರಗಳನ್ನು ಇಡತಕ್ಕದ್ದು ಮತ್ತು ವಾರ್ಷಿಕವಾಗಿ ಲೆಕ್ಕಪರಿಶೋಧಿಸುವಂತೆ ಮಾಡತಕ್ಕದ್ದು".

(2) (2) ನೇ ಉಪನಿಯಮದಲ್ಲಿ,–

(ಎ) (ix) ಖಂಡದಲ್ಲಿ "31ನೇ ಪ್ರಕರಣದ ಮೇರೆಗೆ" ಎಂಬ ಪದಗಳ ನಂತರ "ಅಧಿಸೂಚಿತ ಸಂಸ್ಥೆಯಲ್ಲಿ ಕಾರ್ಯನಿರ್ವಾಹಕ ಅಧಿಕಾರಿ ಇಲ್ಲದಿರುವಾಗ" ಎಂಬ ಪದಗಳನ್ನು ಸೇರಿಸತಕ್ಕದ್ದು.

(ಬಿ) (x)ನೇ ಪ್ರಕರಣದಲ್ಲಿ "ಅಧಿಸೂಚಿತ ಸಂಸ್ಥೆಯಲ್ಲಿ ಕಾರ್ಯನಿರ್ವಾಹಕ ಅಧಿಕಾರಿ ಇಲ್ಲದಿರುವಾಗ" ಎಂಬ ಪದಗಳನ್ನು ಅಂತ್ಯದಲ್ಲಿ ಸೇರಿಸತಕ್ಕದ್ದು.

**19. 33ಎ ಮತ್ತು 33ಬಿ ಹೊಸ ನಿಯಮಗಳ ಸೇರ್ಪಡೆ.–** ಸದರಿ ನಿಯಮಗಳ 33ನೇ ನಿಯಮದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**33ಎ.ಅಧಿಸೂಚಿತ ಸಂಸ್ಥೆಗೆ ಕಾರ್ಯನಿರ್ವಾಹಕ ಅಧಿಕಾರಿಯ ನೇಮಕ.–** (1) ಸರ್ಕಾರ ಅಥವಾ ಸಂದರ್ಭಾನುಸಾರವಾಗಿ ಆಯುಕ್ತರು, ಸಂಸ್ಥೆಯ ಒಟ್ಟು ವರಮಾನವನ್ನು ಆಧರಿಸಿ ಅಧಿಸೂಚಿತ ಸಂಸ್ಥೆಗೆ ಕಾರ್ಯನಿರ್ವಾಹಕ ಅಧಿಕಾರಿಯನ್ನು ನೇಮಿಸತಕ್ಕದ್ದು ಮತ್ತು ಈ ಉದ್ದೇಶಕ್ಕಾಗಿ ಸಂಸ್ಥೆಯನ್ನು ಈ ಕೆಳಗಿನಂತೆ ವರ್ಗೀಕರಿಸಬಹುದು:–

| ಕ್ರ ಸಂ | ಸಂಸ್ಥೆಯ ವರಮಾನ | ನೇಮಕ ಮಾಡಬೇಕಾದ ಕಾರ್ಯನಿರ್ವಾಹಕ ಅಧಿಕಾರಿಯ ದರ್ಜೆ |
|---|---|---|
| 1. | ಒಟ್ಟು ವರಮಾನವು ವರ್ಷವೊಂದಕ್ಕೆ ಐದು ಕೋಟಿ ರೂಪಾಯಿಗಳನ್ನು ಮೀರಿದಲ್ಲಿ | ಗ್ರೂಪ್ 'ಎ' ಹಿರಿಯ ಶ್ರೇಣಿ ಅಧಿಕಾರಿ |
| 2. | ಒಟ್ಟು ವರಮಾನವು ವರ್ಷವೊಂದಕ್ಕೆ ಒಂದು ಕೋಟಿ ರೂಪಾಯಿಗಳನ್ನು ಮೀರಿದ್ದು, ಆದರೆ ಐದು ಕೋಟಿ ರೂಪಾಯಿಗಳನ್ನು ಮೀರಿರದಿದ್ದಲ್ಲಿ | ಗ್ರೂಪ್ 'ಎ' ಕಿರಿಯ ಶ್ರೇಣಿ ಅಧಿಕಾರಿ |
| 3. | ಒಟ್ಟು ವರಮಾನವು ವರ್ಷವೊಂದಕ್ಕೆ ಐವತ್ತು ಲಕ್ಷ ರೂಪಾಯಿಗಳನ್ನು ಮೀರಿದ್ದು, ಆದರೆ ಒಂದು ಕೋಟಿ ರೂಪಾಯಿಗಳನ್ನು ಮೀರಿರದಿದ್ದಲ್ಲಿ | ಗ್ರೂಪ್ 'ಬಿ' ಅಧಿಕಾರಿ |
| 4. | ಒಟ್ಟು ವರಮಾನವು ವರ್ಷವೊಂದಕ್ಕೆ ಹದಿನೈದು ಲಕ್ಷ ರೂಪಾಯಿಗಳನ್ನು ಮೀರಿದ್ದು, ಆದರೆ ಐವತ್ತು ಲಕ್ಷ ರೂಪಾಯಿಗಳನ್ನು ಮೀರಿರದಿದ್ದಲ್ಲಿ | ಯಾವುದೇ ಗ್ರೂಪ್ 'ಸಿ' ಶ್ರೇಣಿಗೆ ಸಮನಾದ ಅಧಿಕಾರಿ |

**33ಬಿ. ಕಾರ್ಯನಿರ್ವಾಹಕ ಅಧಿಕಾರಿಯ ಅಧಿಕಾರ ಮತ್ತು ಕರ್ತವ್ಯಗಳು.–** (1) ದೇವಸ್ಥಾನದ ಪಾವಿತ್ರ್ಯತೆ ಮತ್ತು ಪಾರಂಪರಿಕ ಲಕ್ಷಣವನ್ನು ನಿರ್ವಹಿಸುವುದರ ಜೊತೆಗೆ ಯಾವುದೇ ದೂರಗಳಿಲ್ಲದೇ ದೇವಸ್ಥಾನದಲ್ಲಿ ದೈನಂದಿನ ಪೂಜೆಗಳು, ವಿನಿಯೋಗಗಳು ಮತ್ತು ಸೇವೆಗಳನ್ನು ನಡೆಸುವುದಕ್ಕಾಗಿ ಅಧಿಸೂಚಿತ ಸಂಸ್ಥೆ/ ಘೋಷಿತ ಸಂಸ್ಥೆಯ ವ್ಯವಹಾರದ ಸುಲಲಿತ ಆಡಳಿತಕ್ಕೆ ಕಾರ್ಯನಿರ್ವಾಹಕ ಅಧಿಕಾರಿಯು ಜವಾಬ್ದಾರನಾಗಿರತಕ್ಕದ್ದು.

(2) ಭಕ್ತಾದಿಗಳಿಗೆ ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು, ಸ್ನಾನಗೃಹ, ಶೌಚಾಲಯಗಳು, ಬಟ್ಟೆ ಬದಲಾಯಿಸುವ ಕೊಠಡಿಗಳು ಮತ್ತು ಎಲ್ಲೆಲ್ಲಿ ಸಾಧ್ಯವೋ ಅಲ್ಲಿ ವಸತಿ ಸಂಬಂಧಿಸಿದಂತಹ ಸ್ಥಳಾವಕಾಶವನ್ನು ಒದಗಿಸುವುದಕ್ಕೆ ಕಾರ್ಯನಿರ್ವಾಹಕ ಅಧಿಕಾರಿಯು ಜವಾಬ್ದಾರನಾಗಿರತಕ್ಕದ್ದು.

(3) ಸಂಸ್ಥೆಯು ಕ್ರಮಬದ್ಧವಾದ ಲೆಕ್ಕಪತ್ರಗಳನ್ನು ಇಡುವುದಕ್ಕೆ ಮತ್ತು ಎಲ್ಲಾ ಪೂರಕ ಸ್ವೀಕೃತಿಗಳು ಮತ್ತು ವೋಚರ್‌ಗಳೊಂದಿಗೆ ನಿಯಮಿಸಲಾದಂತೆ ಅಗತ್ಯವಾದ ರಿಜಿಸ್ಟ್ರರ್‌ಗಳನ್ನು ಇಡುವುದಕ್ಕೆ ಕಾರ್ಯನಿರ್ವಾಹಕ ಅಧಿಕಾರಿಯು ಜವಾಬ್ದಾರನಾಗಿರತಕ್ಕದ್ದು.

(4) ಕಾರ್ಯನಿರ್ವಾಹಕ ಅಧಿಕಾರಿಯು ಸಂಸ್ಥೆಯ ದೈನಂದಿನ ವ್ಯವಹಾರಗಳ ಪ್ರಭಾರವನ್ನು ಹೊಂದಿರತಕ್ಕದ್ದು ಮತ್ತು ಆತನು ಸಂಸ್ಥೆಯ ಪರವಾಗಿ ಎಲ್ಲಾ ಹಣ, ಕಾಣಿಕೆ, ಬಾಡಿಗೆಗಳು ಇತ್ಯಾಧಿಗಳನ್ನು ಸ್ವೀಕರಿಸತಕ್ಕದ್ದು ಮತ್ತು ನಿಯಮಿಸಲಾದ ಪ್ರಾಧಿಕಾರವು ಅನುಮೋದಿಸಿದ ಆಯವ್ಯಯದ ಅನುಸಾರವಾಗಿ ಬಟವಾಡೆಯನ್ನು ಮಾಡತಕ್ಕದ್ದು.

(5) ದೇವಸ್ಥಾನದ ಸುರಕ್ಷಿತ ಲಾಕರ್ ಅಥವಾ ಖಜಾನೆ ಅಥವಾ ಬ್ಯಾಂಕ್ ಲಾಕರ್‌ನಲ್ಲಿ ಇಡಲಾಗುವ, ಸಂಸ್ಥೆಯಲ್ಲಿ ಸ್ವೀಕೃತವಾದ ಚಿನ್ನ, ಬೆಳ್ಳಿ ಮತ್ತು ಬೆಲೆ ಬಾಳುವ ಹರಳುಗಳ ಮೌಲ್ಯಯುತ ಆಭರಣಗಳು ಒಳಗೊಂಡಂತೆ ಸಂಸ್ಥೇಯ ಎಲ್ಲಾ ಚರ ಸ್ವತ್ತುಗಳಿಗೆ ಕಾರ್ಯನಿರ್ವಾಹಕ ಅಧಿಕಾರಿಯು ಜವಾಬ್ದಾರನಾಗಿರತಕ್ಕದ್ದು.

(6) ಅರ್ಚಕರು ಮತ್ತು ದೇವಸ್ಥಾನದ ನೌಕರರು ದೇವಸ್ಥಾನದ ಕಾರ್ಯನಿರ್ವಾಹಕ ಅಧಿಕಾರಿಯ ನೇರ ನಿಯಂತ್ರಣದಲ್ಲಿ ಕಾರ್ಯನಿರ್ವಹಿಸತಕ್ಕದ್ದು ಮತ್ತು ಯಾವುದೇ ಕರ್ತವ್ಯ ಲೋಪಗಳು, ದುರ್ನಡತೆ, ಯಾವುದೇ ಅಚಾತುರ್ಯಗಳು, ಅನಧಿಕೃತ ಗೈರುಹಾಜರಿ, ದೂರುಗಳನ್ನು, ಅಂಥ ಅರ್ಚಕರು/ ದೇವಸ್ಥಾನದ ನೌಕರರ ವಿರುದ್ಧ ಅಧಿನಿಯಮದ 16ನೇ ಪ್ರಕರಣದಡಿಯಲ್ಲಿ ಕ್ರಮ ಕೈಗೊಳ್ಳುವುದಕ್ಕಾಗಿ ವ್ಯವಸ್ಥಾಪನಾ ಸಮಿತಿಯ ಮುಂದೆ ಇಡತಕ್ಕದ್ದು.

(7) ಕಾರ್ಯನಿರ್ವಾಹಕ ಅಧಿಕಾರಿಯು ವರ್ಷಕ್ಕೊಮ್ಮೆ ತಪಶೀಲು ಪಟ್ಟಿ ರಿಜಿಸ್ಟರಿಗೆ ಅನುಸಾರವಾಗಿ ಸಂಸ್ಥೆಯ ಆಭರಣಗಳು ಮತ್ತು ಇತರ ಚರ ಆಸ್ತಿಗಳನ್ನು ಸತ್ಯಾಪನೆ ಮಾಡತಕ್ಕದ್ದು ಮತ್ತು ಸತ್ಯಾಪನಾ ವರದಿಯನ್ನು ಸಮಿತಿಗೆ ಮತ್ತು ನಿಯಮಿಸಲಾದ ಪ್ರಾಧಿಕಾರಕ್ಕೆ ಕಳುಹಿಸತಕ್ಕದ್ದು.

(8) ಕಾರ್ಯನಿರ್ವಾಹಕ ಅಧಿಕಾರಿಯು ಪ್ರತಿ ಆರ್ಥಿಕ ವರ್ಷದ ಕೊನೆಯಲ್ಲಿ, ನಿಯಮಿಸಲಾದ ನಮೂನೆಯಲ್ಲಿ ಲೆಕ್ಕಪತ್ರಗಳ ತಃಖ್ತೆಯನ್ನು ವ್ಯವಸ್ಥಾಪನಾ ಸಮಿತಿಯ ಮುಂದೆ ಇಡತಕ್ಕದ್ದು ಮತ್ತು ಅದರ ಒಂದು ಪ್ರತಿಯನ್ನು ನಿಯಮಿಸಲಾದ ಪ್ರಾಧಿಕಾರಕ್ಕೆ ಕಳುಹಿಸತಕ್ಕದ್ದು.

(9) ಕಾರ್ಯನಿರ್ವಾಹಕ ಅಧಿಕಾರಿಯು ವ್ಯವಸ್ಥಾಪನಾ ಸಮಿತಿಯ ಗೊತ್ತುವಳಿಯೊಂದಿಗೆ ಹಿಂದಿನ ವರ್ಷದ ವಾಸ್ತವಿಕ ವರಮಾನ ಮತ್ತು ವೆಚ್ಚದ ಆಧಾರದ ಮೇಲೆ ಆಯವ್ಯಯ ಅಂದಾಜನ್ನು ಅನುಮೋದನೆಗಾಗಿ, ನಿಯಮಿಸಲಾದ ನಮೂನೆಯಲ್ಲಿ ವರ್ಷದ ಪ್ರಾರಂಭಕ್ಕೆ ತೊಂಬತ್ತು ದಿನಗಳ ಮೊದಲು ನಿಯಮಿಸಲಾದ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

(10) ಕಾರ್ಯನಿರ್ವಾಹಕ ಅಧಿಕಾರಿಯು ವ್ಯವಸ್ಥಾಪನಾ ಸಮಿತಿಯ ಗೊತ್ತುವಳಿಯೊಂದಿಗೆ ಸ್ವತ್ತಿನ ರಿಜಿಸ್ಟರ್ ಮತ್ತು ದಿಟ್ಟಂನ್ನು ಅನುಮೋದನೆಗಾಗಿ ನಿಯಮಿಸಲಾದ ಪ್ರಾಧಿಕಾರಕ್ಕೆ ಕಳುಹಿಸತಕ್ಕದ್ದು.

(11) ಸಭೆಯಲ್ಲಿ ಚರ್ಚಿಸಬೇಕಾದ ಕಾರ್ಯಸೂಚಿಯೊಂದಿಗೆ, ಸಂಸ್ಥೆಯ ವ್ಯವಸ್ಥಾಪನಾ ಸಮಿತಿಯ ಮಾಸಿಕ ಸಭೆ ಅಥವಾ ವಿಶೇಷ ಸಭೆಯನ್ನು ಕಾರ್ಯನಿರ್ವಾಹಕ ಅಧಿಕಾರಿಯು ಕರೆಯತಕ್ಕದ್ದು.

(12) ಸಂಸ್ಥೆಯ ಆರ್ಥಿಕ ವ್ಯವಹಾರ ಮತ್ತು ಬ್ಯಾಂಕು ಖಾತೆಯ ನಿರ್ವಹಣೆಯನ್ನು ಕಾರ್ಯನಿರ್ವಾಹಕ ಅಧಿಕಾರಿಯು ಮಾಡತಕ್ಕದ್ದು".

**20. 34ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 34ನೇ ನಿಯಮದ (1)ನೇ ಉಪನಿಯಮದಲ್ಲಿ,–

(1) "ಇಪ್ಪತ್ತೈದು ಸಾವಿರ ರೂಪಾಯಿಗಳನ್ನು" ಎಂಬ ಪದಗಳಿಗೆ "ಒಂದು ಲಕ್ಷ ರೂಪಾಯಿಗಳನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(2) ಪರಂತುಕವನ್ನು ಬಿಟ್ಟು ಬಿಡತಕ್ಕದ್ದು.

**21. 36ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 36ನೇ ನಿಯಮದಲ್ಲಿ,–

(1) (1)ನೇ ಉಪನಿಯಮಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು:–

ಅಂದರೆ,

"(1) ಸಂಸ್ಥೆಯ ಒಟ್ಟು ವಾರ್ಷಿಕ ಆದಾಯವು ಐದು ಲಕ್ಷ ರೂಪಾಯಿಗಳು ಮತ್ತು ಹೆಚ್ಚು ಇರುವ ಸಂದರ್ಭದಲ್ಲಿ, ಸಂಸ್ಥೆಯ ಲೆಕ್ಕ ಪತ್ರಗಳ ವಾರ್ಷಿಕ ಲೆಕ್ಕಪರಿಶೋಧನೆಯನ್ನು ರಾಜ್ಯ ಲೆಕ್ಕ ಪತ್ರಗಳ ಇಲಾಖೆಯಿಂದ ನಡೆಸತಕ್ಕದ್ದು ಮತ್ತು ಅಂಥ ಸಂಸ್ಥೆಗೆ ಯಾವುದೇ ಲೆಕ್ಕ ಪರಿಶೋಧನಾ ಶುಲ್ಕವನ್ನು ವಿಧಿಸತಕ್ಕದ್ದಲ್ಲ".

(2) (2)ನೇ ಉಪ ನಿಯಮದಲ್ಲಿ "ಇಪ್ಪತ್ತೈದು ಸಾವಿರ ರೂಪಾಯಿಗಳನ್ನು" ಎಂಬ ಪದಗಳಿಗೆ "ಒಂದು ಲಕ್ಷ ರೂಪಾಯಿಗಳನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(3) (3)ನೇ ಉಪನಿಯಮದಲ್ಲಿ "ಇಪ್ಪತ್ತೈದು ಸಾವಿರ ರೂಪಾಯಿ" ಎಂಬ ಪದಗಳಿಗೆ "ಒಂದು ಲಕ್ಷ ರೂಪಾಯಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**22. 37ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 37ನೇ ನಿಯಮದ (2)ನೇ ಉಪನಿಯಮದಲ್ಲಿ, ಕೋಷ್ಟಕ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**ಕೋಷ್ಟಕ**

| ಕ್ರ ಸಂ | ಹೊಡೆದು ಹಾಕಲು (ರೈಟ್ ಆಫ್) ಆದೇಶಿಸುವುದಕ್ಕೆ ಸಕ್ಷಮ ಪ್ರಾಧಿಕಾರಿ | ವರ್ಷವೊಂದರಲ್ಲಿ ಹೊಡೆದು ಹಾಕಲು ಮಂಜೂರು ಮಾಡಬಹುದಾದ ಮೊತ್ತ |
|---|---|---|
| 1. | ಸಹಾಯಕ ಆಯುಕ್ತ | 'ಸಿ' ವರ್ಗದ ಸಂಸ್ಥೆಗಳ ಸಂಬಂಧದಲ್ಲಿ ರೂ. 10,000–00 ದವರೆಗೆ |
| 2. | ಉಪ ಆಯುಕ್ತ | ಮೌಲ್ಯವು 'ಸಿ' ವರ್ಗದ ಸಂಸ್ಥೆಗಳ ಸಂಬಂಧದಲ್ಲಿ ರೂ. 10,000–00 ಮೀರಿದ್ದು, ಆದರೆ ರೂ. 25,000–00 ಗಳಿಗೆ ಮೀರದಂತೆ ಮತ್ತು 'ಬಿ' ವರ್ಗದ ಸಂಸ್ಥೆಗಳ ಸಂಬಂಧದಲ್ಲಿ ರೂ. 25000–00 ಗಳವರೆಗೆ |
| 3. | ಆಯುಕ್ತ | ಮೌಲ್ಯವು 'ಬಿ' ಮತ್ತು 'ಸಿ' ವರ್ಗದ ಸಂಸ್ಥೆಗಳ ಸಂಬಂಧದಲ್ಲಿ ರೂ. 25000–00 ಮೀರಿದ್ದು, ರೂ. 50000–00 ಮೀರದಂತೆ ಮತ್ತು 'ಎ' ವರ್ಗದ ಸಂಸ್ಥೆಗಳ ಸಂಬಂಧದಲ್ಲಿ ರೂ. 50000–00 ಮೀರದಂತೆ |
| 4. | ರಾಜ್ಯ ಸರ್ಕಾರ | ಎಲ್ಲಾ ಸಂಸ್ಥೆಗಳ ಸಂಬಂಧದಲ್ಲಿ ರೂ. 50000–00 ಮೀರಿರುವಾಗ |

**23. 40ಎ, 40ಬಿ, 40ಸಿ ಮತ್ತು 40ಡಿ ಹೊಸ ನಿಯಮಗಳ ಸೇರ್ಪಡೆ**–ಸದರಿ ನಿಯಮಗಳ, 40ನೇ ನಿಯಮದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು ಎಂದರೆ:–

**"40ಎ. ಅಧಿಸೂಚಿತ ಸಂಸ್ಥೆಯ ಕಟ್ಟಡಗಳ ವ್ಯವಸ್ಥಾಪನೆ, ಸಂರಕ್ಷಣೆ ಮತ್ತು ಅಭಿವೃದ್ಧಿ.**– (1) ಅಧಿಸೂಚಿತ ಸಂಸ್ಥೆಯ ವ್ಯವಸ್ಥಾಪನಾ ಸಮಿತಿಯ ಅಧ್ಯಕ್ಷರು, ಕಾರ್ಯನಿರ್ವಾಹಕ ಅಧಿಕಾರಿ ಅಥವಾ ವ್ಯವಸ್ಥಾಪಕರು, ಸಕ್ಷಮ ಪ್ರಾಧಿಕಾರದ ಪೂರ್ವ ಮಂಜೂರಾತಿಯಿಲ್ಲದೆ ಯಾವುದೇ ಅಧಿಸೂಚಿತ/ಘೋಷಿತ ಸಂಸ್ಥೆಯ ಯಾವುದೇ ಅಭಿವೃದ್ಧಿ ಕಾರ್ಯವನ್ನು ಕೈಗೊಳ್ಳತಕ್ಕದ್ದಲ್ಲ ಅಥವಾ ಕಾರ್ಯರೂಪಕ್ಕೆ ತರತಕ್ಕದ್ದಲ್ಲ.

(2) ಸಂಸ್ಥೆಯ ಅಧ್ಯಕ್ಷರು, ಕಾರ್ಯನಿರ್ವಾಹಕ ಅಧಿಕಾರಿ ಅಥವಾ ವ್ಯವಸ್ಥಾಪಕರು ಮುಂದಿನ ವರ್ಷದಲ್ಲಿ ಕೈಗೊಳ್ಳಲು ಅವಶ್ಯವಿರುವ ಅಭಿವೃದ್ಧಿ ಕಾಮಗಾರಿಗಳ ವಿವರಗಳೊಂದಿಗೆ ಅಂದಾಜು ವೆಚ್ಚದ ಮತ್ತು ಪ್ರಸ್ತಾಪಿತ ಕಾಮಗಾರಿಯ ನಕ್ಷೆಯೊಂದಿಗೆ ಪ್ರಸ್ತಾವನೆಯನ್ನು ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

(3) ಆಗಮ ಶಾಸ್ತ್ರ ಮತ್ತು ವಾಸ್ತು ಶಾಸ್ತ್ರವನ್ನು ಒಳಗೊಳ್ಳುವ ದೇವಸ್ಥಾನ ನಿರ್ಮಾಣದ ಅಥವಾ ಅದರ ಯಾವುದೇ ಭಾಗಕ್ಕೆ ಸಂಬಂಧಿಸಿದ ಅಭಿವೃದ್ಧಿ ಕಾಮಗಾರಿಗಳ ಪ್ರಸ್ತಾವನೆಗೆ, ಸಂಸ್ಥೆಯಲ್ಲಿ ಪ್ರಚಲಿತವಿರುವ ತತ್ವಗಳು ಮತ್ತು ಸಾಂಪ್ರದಾಯಿಕ ವಾಸ್ತು, ಶಿಲ್ಪಶಾಸ್ತ್ರ, ಸಾಂಸ್ಕೃತಿಕ ಮತ್ತು ಶಿಲ್ಪಕಲೆಯ ಲಕ್ಷಣಕ್ಕೆ ಸಂಬಂಧಿಸಿದಂತೆ ಆಗಮಶಾಸ್ತ್ರ ತಜ್ಞರು ಮತ್ತು ವಾಸ್ತುಶಾಸ್ತ್ರ ತಜ್ಞರ ಅಭಿಪ್ರಾಯವನ್ನು ಪಡೆಯತಕ್ಕದ್ದು.

(4) ಯಾವುದೇ ಕಾಮಗಾರಿಯ ಅಂದಾಜನ್ನು ಮಂಜೂರು ಮಾಡುವ ಅಧಿಕಾರವನ್ನು ಸರ್ಕಾರವು ವಿವಿಧ ಪ್ರಾಧಿಕಾರಿಗಳಿಗೆ ಅಥವಾ ಯಾವುದೇ ಸಂಸ್ಥೆಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಅಧಿಸೂಚನೆಯ ಮೂಲಕ ಕಾಲಕಾಲಕ್ಕೆ ಪ್ರತ್ಯಾಯೋಜಿಸತಕ್ಕದ್ದು.

(5) (ಎ) ಸಂಸ್ಥೆಯ ಅಧ್ಯಕ್ಷರು, ಕಾರ್ಯನಿರ್ವಾಹಕ ಅಧಿಕಾರಿ ಅಥವಾ ವ್ಯವಸ್ಥಾಪಕರು ಅಭಿವೃದ್ಧಿ ಕಾಮಗಾರಿಯ ವೆಚ್ಚವನ್ನು ಸಂಸ್ಥೆಯ ನಿಧಿಯಿಂದ ಅಥವಾ ಭಕ್ತಾದಿಗಳು ನೀಡಿದ ದೇಣಿಗೆ ಮೂಲಕ ಭರಿಸುವುದಾದಲ್ಲಿ ಅಂತಹ ಪ್ರಸ್ತಾವನೆಯ ಅಂದಾಜುಪಟ್ಟಿಯನ್ನು ಲೋಕೋಪಯೋಗಿ ಇಲಾಖೆಯ ಪ್ರಾಧಿಕಾರಿಗಳಿಂದ ಅಥವಾ ಯಾವುದೇ ಇತರೆ ಸರ್ಕಾರದ ಏಜೆನ್ಸಿಯಿಂದ ಲೋಕೋಪಯೋಗಿ ಸಂಹಿತೆಯ ಪ್ರಕಾರ ತಾಂತ್ರಿಕ ಶೋಧನೆಗೆ ಒಳಪಡಿಸಿ ಹಾಗೂ ಆಯವ್ಯಯದಲ್ಲಿ ಅವಶ್ಯಕ ಅವಕಾಶವನ್ನು ಒದಗಿಸಿಕೊಂಡು ಪ್ರಸ್ತಾವನೆಯನ್ನು ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

(ಬಿ) ಸಕ್ಷಮ ಪ್ರಾಧಿಕಾರವು ಸಂಸ್ಥೆಗಳ ಪ್ರಾಧಿಕಾಗಳು ಸಲ್ಲಿಸಿದ ಅಂದಾಜು ಮತ್ತು ನಕ್ಷೆಯನ್ನು ಅಂಥ ಮಾರ್ಪಾಡಿನೊಂದಿಗೆ ಮತ್ತು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಷರತ್ತುಗಳೊಂದಿಗೆ, ಅದರ ಅವಶ್ಯಕ ವೆಚ್ಚದ ಯುಕ್ತ ಅನುಮೋದನೆಯೊಡನೆ ಮಂಜೂರು ಮಾಡಬಹುದು.

ಪರಂತು, ಭಾರತೀಯ ಸರ್ವೇಕ್ಷಣಾ ಇಲಾಖೆ ಅಥವಾ ರಾಜ್ಯ ಪ್ರಾಚ್ಯವಸ್ತು ಇಲಾಖೆಯು ನಿಯಂತ್ರಿಸುವ ಸಂಸ್ಥೆಗೆ ಸಂಬಂಧಪಟ್ಟ ಅಭಿವೃದ್ಧಿ ಕಾಮಗಾರಿಯನ್ನು ಕಾರ್ಯಗತಗೊಳಿಸುವುದಕ್ಕೆ ಮುಂಚೆ, ಸಂಬಂಪಟ್ಟ ಪ್ರಾಧಿಕಾರಗಳ ಅವಶ್ಯಕ ಅನುಮತಿಯನ್ನು ಪಡೆಯಲು ಆದೇಶದಲ್ಲಿ ಷರತ್ತುಗಳನ್ನು ವಿಧಿಸಬಹುದು.

ಮತ್ತು ಪರಂತು, ಅಧಿಸೂಚಿತ ಸಂಸ್ಥೆಯ ಕಾಮಗಾರಿಗಳನ್ನು ಕಾರ್ಯಗತಗೊಳಿಸುವಾಗ, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳು 2000ದ ಉಪಬಂಧಗಳು ಅನ್ವಯವಾಗುವ ಕಡೆಗಳಲ್ಲೆಲ್ಲಾ ಅನ್ವಯಿಸತಕ್ಕದ್ದು.

(6) ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆ ಅಥವಾ ಸರ್ಕಾರದ ಏಜೆನ್ಸಿ ಅಥವಾ ನಿರ್ದಿಷ್ಟ ಕಾಮಗಾರಿಯನ್ನು ಕಾರ್ಯಗತಗೊಳಿಸುವುದಕ್ಕಾಗಿ ಸಕ್ಷಮ ಪ್ರಾಧಿಕಾರವು ರಚಿಸಿದ ತಜ್ಞರ ಸಮಿತಿಯ ಮೂಲಕ ಕಾರ್ಯಗತಗೊಳಿಸಬಹುದು.

ಪರಂತು, ತಜ್ಞರ ಸಮಿತಿಗೆ ಟೆಂಡರನ್ನು ಕರೆಯುವ, ಟೆಂಡರನ್ನು ಅಂತಿಮಗೊಳಿಸುವ ಮತ್ತು ಎಲ್ಲಾ ಕಾಮಗಾರಿಯನ್ನು ಕಾರ್ಯಗತಗೊಳಿಸುವ ಮತ್ತು ಪರೀಕ್ಷಾರ್ಥ ಅಳತೆ ಮತ್ತು ಮೌಲ್ಯಮಾಪನವನ್ನು ಪರೀಕ್ಷಿಸಿದ ತರುವಾಯ ಕಾಮಗಾರಿ ಬಿಲ್ಲನ್ನು ಪಾವತಿಸುವ ಅಧಿಕಾರವನ್ನು ವಹಿಸಬಹುದು.

(7) ಕಾಮಗಾರಿಯು ಮುಕ್ತಾಯವಾದ ತರುವಾಯ, ದೂರಿನ ಮೇರೆಗೆ ಅಥವಾ ಅನ್ಯಥಾ, ಕಾಮಗಾರಿಯ ಗುಣಮಟ್ಟವು ನಿಗದಿತ ಗುಣಮಟ್ಟಕ್ಕಿಂತ ಕಡಿಮೆಯೆಂದು ಕಂಡುಬಂದರೆ, ಆಯುಕ್ತರು, ಕರ್ನಾಟಕ ಸರ್ಕಾರದ ಗುಣಮಟ್ಟ ಕಾರ್ಯಪಡೆ ಅಥವಾ ಅ ಉದ್ದೇಶಕ್ಕಾಗಿ ರಚಿತವಾದ ತಜ್ಞರ ಸಮಿತಿಯಿಂದ ಪರೀಕ್ಷಾರ್ಥ ಅಳತೆಗೆ ಆದೇಶಿಸಬಹುದು. ಗುಣಮಟ್ಟ ಕಾರ್ಯಪಡೆ ಅಥವಾ ಆ ಉದ್ದೇಶಕ್ಕಾಗಿ ರಚಿತವಾದ ಸಮಿತಿಯ ವರದಿಯಲ್ಲಿ ಗುಣಮಟ್ಟವು ಕಡಿಮೆಯದ್ದಾಗಿದೆ ಎಂದು ಕಂಡುಬಂದರೆ, ಆಯುಕ್ತನು ಕಾಮಗಾರಿಯನ್ನು ವಹಿಸಿಕೊಟ್ಟ ಸಂಬಂಧಪಟ್ಟ ಏಜೆನ್ಸಿಗೆ ಲೋಪಗಳನ್ನು ಸರಿಪಡಿಸುವಂತೆ ಅಥವಾ ವಸ್ತುಗಳನ್ನು ಬದಲಾಯಿಸುವಂತೆ ಆದೇಶಿಸಬಹುದು. ಸದರಿ ಏಜೆನ್ಸಿಯು ಆಯುಕ್ತನ ನಿರ್ದೇಶನಗಳನ್ನು ಪಾಲಿಸುವಲ್ಲಿ ವಿಫಲನಾದಲ್ಲಿ, ಆಯುಕ್ತನು, 40ನೇ ಪ್ರಕರಣದ ಅಡಿಯಲ್ಲಿ ವ್ಯವಹರಣೆಗಳನ್ನು ಪ್ರಾರಂಭಿಸಬಹುದು ಮತ್ತು ಕಾಮಗಾರಿಯನ್ನು ಕಾರ್ಯಗತಗೊಳಿಸಿದ ಸಂಬಂಧಿಸಿದ ಏಜೆನ್ಸಿಯಿಂದ ಸಂಸ್ಥೆಗೆ ಆದ ನಷ್ಟದ ಅಧಿಭಾರದ ಆದೇಶವನ್ನು ಹೊರಡಿಬಹುದು.

(8) ಯಾವುದೇ ಅಧಿಸೂಚಿತ ಸಂಸ್ಥೆಯ ಯಾವುದೇ ಕಾಮಗಾರಿಯು, ಯಾವುದೇ ವಾಸ್ತುಶಾಸ್ತ್ರ ಅಥವಾ ಶಿಲ್ಪಶಾಸ್ತ್ರದ ಲಕ್ಷಣವನ್ನು ಒಳಗೊಂಡಿದ್ದರೆ, ನಿಯಮಿಸಲಾದ ಪ್ರಾಧಿಕಾರವು, ಈ ಅಧಿನಿಯಮದ 69(ಡಿ) ಪ್ರಕರಣದಡಿಯಲ್ಲಿ ರಚಿತವಾದ ವಾಸ್ತುಶಿಲ್ಪ ಸಮಿತಿಯ ಅಭಿಪ್ರಾಯವನ್ನು ಪಡೆಯಬಹುದು.

ವಾಸ್ತುಶಿಲ್ಪ ಸಮಿತಿಯ ಅಭಿಪ್ರಾಯವನ್ನು ಸ್ವೀಕರಿಸಿದ ಮೇಲೆ, ನಕ್ಷೆ/ಅಂದಾಜಿನಲ್ಲಿ ಬದಲಾವಣೆ ಅಥವಾ ಮಾರ್ಪಾಡಿನ ಅವಶ್ಯಕತೆಯಿದೆ ಎಂದು ಕಂಡುಬಂದರೆ, ವಾಸ್ತುಶಿಲ್ಪ ಸಮಿತಿಯ ಅಭಿಪ್ರಾಯಕ್ಕೆ ಅನುಸಾರವಾಗಿ ಅದನ್ನು ಪರಿಷ್ಕರಿಸಬಹುದು ಮತ್ತು ಮಂಜೂರಾತಿಗಾಗಿ ಸಕ್ಷಮ ಪ್ರಾಧಿಕಾರಕ್ಕೆ ಮರು ಸಲ್ಲಿಸಬಹುದು.

(9) ವೋಚರ್‌ಗಳು ಮತ್ತು ಬಿಲ್ಲುಗಳೊಂದಿಗೆ ವಹಿಗಳು ಮತ್ತು ಲೆಕ್ಕಪತ್ರಗಳನ್ನು ಟೆಂಡರ್ ದಾಖಲೆ, ಮೌಲ್ಯ ಮಾಪನ ಮತ್ತು ಕಾಮಗಾರಿಗಳ ಕಾರ್ಯಪೂರ್ಣ ವರದಿಯನ್ನು ನಿರ್ವಹಿಸುವುದು ಮತ್ತು ಲೆಕ್ಕ ಪರಿಶೋಧನೆಗಾಗಿ ಮಂಡಿಸುವುದು ವ್ಯವಸ್ಥಾಪನಾ ಸಮಿತಿಯ ಅಧ್ಯಕ್ಷರು, ಕಾರ್ಯನಿರ್ವಾಹಕ ಅಧಿಕಾರಿ ಮತ್ತು ವ್ಯವಸ್ಥಾಪಕರ ಜವಾಬ್ದಾರಿಯಾಗಿರತಕ್ಕದ್ದು.

(10) ಯಾವುದೇ ಸಂಸ್ಥೆಯ ದುರಸ್ತಿಗಳಿಗೆ ಅಥವಾ ಅಭಿವೃದ್ಧಿ ಅಥವಾ ಯಾವುದೇ ಹೊಸ ರಚನೆಗೆ ಸಂಬಂಧಿಸಿದಂತೆ, ಯಾವುದೇ ನಿರ್ದಿಷ್ಟ ವೆಚ್ಚವನ್ನು ಭಕ್ತಾದಿ ಅಥವಾ ಆರಾಧಕ ನೀಡಿದಾಗಲೆಲ್ಲಾ ಕಾರ್ಯನಿರ್ವಾಹಕ ಅಧಿಕಾರಿ ಅಥವಾ ವ್ಯವಸ್ಥಾಪನಾ ಸಮಿತಿಯ ಅಧ್ಯಕ್ಷನು ಸದರಿ ಭಕ್ತಾದಿ ಅಥವಾ ಆರಾಧಕನಿಂದ, ಲೋಕೋಪಯೋಗಿ ಇಲಾಖೆ ಅಥವಾ ಯಾವುದೇ ಇತರ ಸರ್ಕಾರದ ಏಜೆನ್ಸಿಯು ಯುಕ್ತವಾಗಿ ಪರಿಶೀಲಿಸಿದ ಅಂದಾಜಿನ ಮತ್ತು ನಕ್ಷೆಯ ವಿವರಗಳೊಂದಿಗೆ, ಪ್ರಸ್ತಾವನೆಯನ್ನು ಪಡೆಯಬಹುದು ಮತ್ತು ಭಕ್ತಾದಿಗಳು/ಆರಾಧಕನು ಕಾಮಗಾರಿಯನ್ನು ಕೈಗೊಳ್ಳಲು ಪ್ರಸ್ತಾವಿಸಿದರೆ, ಕಾಮಗಾರಿಯನ್ನು ಕೈಗೊಳ್ಳುವ ವಿಧಾನವನ್ನು ತೋರಿಸುವ ವಿವರಪಟ್ಟಿ ಮತ್ತು ಕಾಮಗಾರಿಗೆ ಕೊಡ ಮಾಡುವ ಮೊತ್ತ, ನಿರ್ಮಾಣ ಯಾವ ಅವಧಿಯೊಳಗೆ ಪೂರ್ಣಗೊಳ್ಳುವುದು ಎಂಬ ವಿವರಗಳೊಂದಿಗೆ ಪ್ರಸ್ತಾವನೆಯನ್ನು ಪಡೆದುಕೊಳ್ಳಬಹುದು ಮತ್ತು ಸದರಿ ಕೊಡುಗೆಯನ್ನು ಅಂಗೀಕರಿಬಹುದೇ ಹಾಗಿದ್ದಲ್ಲಿ ಯಾವ ಷರತ್ತಿನೊಂದಿಗೆ ಅಂಗೀಕರಿಸಬಹುದು ಎಂಬುದರ ಬಗ್ಗೆ ಸ್ಥಳೀಯ ಅಧಿಕಾರಿಯ ಷರಾದೊಂದಿಗೆ ಸಂಬಂಧಪಟ್ಟ ನಿಯಮಿಸಲಾದ ಪ್ರಾಧಿಕಾರಕ್ಕೆ ಪ್ರಸ್ತಾವನೆ ಕಳುಹಿಸಬಹುದು.

(11) ನಿಯಮಿಸಲಾದ ಪ್ರಾಧಿಕಾರವು, ಪ್ರಸ್ತಾವನೆಯನ್ನು ಸತ್ಯಾಪನೆ ಮಾಡಬಹುದು ಮತ್ತು ಈ ಮುಂದಿನ ನಿರ್ದಿಷ್ಟ ಷರತ್ತುಗಳೊಂದಿಗೆ ಕಾಮಗಾರಿಯು ಪೂರ್ಣವಾಗುವುದಕ್ಕೆ ಯುಕ್ತವೆಂದು ಭಾವಿಸಬಹುದಾದಂತಹ ಷರತ್ತುಗಳೊಂದಿಗೆ ಪ್ರಸ್ತಾವನೆಯ ಮಂಜೂರಾತಿಯನ್ನು ನೀಡಬಹುದು.

(ಎ) ನಿರ್ದಿಷ್ಟಪಡಿಸಿದ ಅವಧಿಯೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸುವುದು.

(ಬಿ) ಸದರಿ ನಿರ್ಮಾಣವು ಪೂರ್ಣಗೊಂಡ ನಂತರ ಮತ್ತು ಅದನ್ನು ಸಂಸ್ಥೆಗೆ ಹಸ್ತಾಂತರಿಸಿದ ತರುವಾಯ ಅದರ ಮೇಲೆ ಭಕ್ತನಿಗೆ/ಆರಾಧಕರಿಗೆ ಯಾವುದೇ ಹಕ್ಕು ಇರುವುದಿಲ್ಲ.

(ಸಿ) ಕಾಮಗಾರಿಯನ್ನು ಸರ್ಕಾರಿ ಇಲಾಖೆಯ ಯಾವುದೇ ತಾಂತ್ರಿಕ ತಜ್ಞರು ಮೇಲ್ವಿಚಾರಣೆ ಮಾಡುವುದು ಮತ್ತು ಕಾರ್ಯಪೂರ್ಣಗೊಂಡ ಪ್ರಮಾಣ ಪತ್ರವನ್ನು ಆತನು ಒದಗಿಸಬೇಕು.

(ಡಿ) ಭಕ್ತಾಧಿ ಅಥವಾ ಆರಾಧಕ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸದರಿ ಕಾಮಗಾರಿಗೆ ಸಾರ್ವಜನಿಕರು ಅಥವಾ ಭಕ್ತಾದಿಗಳಿಂದ ನಿಧಿಯನ್ನು ಅಥವಾ ಸಾಮಾಗ್ರಿಗಳನ್ನು ಸಂಗ್ರಹಿಸತಕ್ಕದ್ದಲ್ಲ.

(12) ಈ ನಿಯಮದ ಉದ್ದೇಶಕ್ಕಾಗಿ:–

(ಎ) 'ಕಟ್ಟಡಗಳ ಅಭಿವೃದ್ಧಿ'ಯು ಅಧಿಸೂಚಿತ ಅಥವಾ ಘೋಷಿತ ಸಂಸ್ಥೆಗಳಿಗೆ ಸೇರಿದ ಕಟ್ಟಡಗಳ ನಿರ್ಮಾಣ, ದುರಸ್ತಿ, ಸಂರಕ್ಷಣೆ, ನಿರ್ವಹಣೆ, ಮಾರ್ಪಾಡು ಪುನರ್ ನಿರ್ಮಾಣ, ಜೀರ್ಣೋದ್ಧಾರ ಮತ್ತು ಸಂರಕ್ಷಣೆ ಹಾಗೂ ಇತರೆ ನಿರ್ಮಾಣ ಕಾಮಗಾರಿಗಳನ್ನು ಒಳಗೊಳ್ಳುತ್ತದೆ.

(ಬಿ) **'ದೇವಾಲಯಗಳ ಆವರಣ'** ಎಂದರೆ ಅಧಿಸೂಚಿತ/ಘೋಷಿತ ಸಂಸ್ಥೆಗಳಿಗೆ ಸೇರಿದ ಅಥವಾ ಹೊಂದಿರುವ ಅಥವಾ ಸ್ವಾಧೀನದಲ್ಲಿರುವ ಜಮೀನಿನಲ್ಲಿ ಅಂಥ ಸಂಸ್ಥೆಗಳಿಗೆ ಸಂಬಂಧಿಸಿದ ಕಟ್ಟಡ ನಿರ್ಮಾಣ ಅಥವಾ ಕಾಮಗಾರಿಯನ್ನು ಒಳಗೊಳ್ಳುತ್ತದೆ.

(ಸಿ) **'ಸಕ್ಷಮ ಪ್ರಾಧಿಕಾರ'** ಎಂದರೆ ಕಾಲಕಾಲಕ್ಕೆ ಸರ್ಕಾರವು ನಿರ್ಧರಿಸಬಹುದಾದ ಅಂದಾಜಿಗೆ ಮಂಜೂರಾತಿಯನ್ನು ನೀಡುವ ಪ್ರಾಧಿಕಾರ.

(ಡಿ) **'ಅಭಿವೃದ್ಧಿ ಸಮಿತಿ'** ಎಂದರೆ ಯಾವುದೇ ನಿರ್ದಿಷ್ಟ ಅಧಿಸೂಚಿತ/ಘೋಷಿತ ಸಮಸ್ಥೆಯ ಯಾವುದೇ ನಿರ್ದಿಷ್ಟ ಅಭಿವೃದ್ಧಿ ಕಾಮಗಾರಿಯನ್ನು ಕೈಗೊಳ್ಳುವುದಕ್ಕೆ ಈ ನಿಯಮಗಳಡಿಯಲ್ಲಿ ನಿಯಮಿಸಲಾದ ಪ್ರಾಧಿಕಾರಿ ರಚಿಸಿದ ಸಮಿತಿ.

**40ಬಿ. ಅಭಿವೃದ್ಧಿ ಸಮಿತಿ ರಚನೆ.**–(1) ಜೀರ್ಣೋದ್ಧಾರ/ ದುರಸ್ತಿ/ ಪುನರ್ ನಿರ್ಮಾಣ ಅಗತ್ಯವಿರುವ ಸಂಸ್ಥೆಗಳಲ್ಲಿ ಸಾರ್ವಜನಿಕ ಮತ್ತು ಸರ್ಕಾರದ ದೇಣಿಗೆಯ ಅವಶ್ಯಕತೆಯಿರುವ ಸಂದರ್ಭದಲ್ಲಿ, ಅಭಿವೃದ್ಧಿ ಸಮಿತಿಯನ್ನು ಸಂಸ್ಥೆಯ ಕಟ್ಟಡದ ಜೀರ್ಣೋದ್ಧಾರದ ಉದ್ದೇಶಕ್ಕಾಗಿ ರಚಿಸಬಹುದು.

(2) ಅಭಿವೃದ್ಧಿ ಸಮಿತಿಯಯು ಅಧ್ಯಕ್ಷ, ಕಾರ್ಯದರ್ಶಿ ಮತ್ತು ಖಜಾಂಚಿ ಹಾಗೂ ಒಂದು ನಿರ್ದಿಷ್ಟ ಸಂಸ್ಥೆಯ ಅಭಿವೃದ್ಧಿಯನ್ನು ಆಸಕ್ತಿಯಿಂದ ದಾನಿಗಳು/ಭಕ್ತಾದಿಗಳ ಪೈಕಿ ಕೆಲವೊಬ್ಬ ಸದಸ್ಯರುಗಳನ್ನು ಒಳಗೊಂಡಿರತಕ್ಕದ್ದು. ವ್ಯವಸ್ಥಾಪನಾ ಸಮಿತಿಯಲ್ಲಿ ಅಧ್ಯಕ್ಷರು ಮತ್ತು ಮೂವರು ಸದಸ್ಯರುಗಳು ಜೀರ್ಣೋದ್ಧಾರ ಸಮಿತಿಯ ಪದನಿಮಿತ್ತ ಸದಸ್ಯರುಗಳಾಗಿರತಕ್ಕದ್ದು ಮತ್ತು ವ್ಯವಸ್ಥಾಪನಾ ಸಮಿತಿಯ ಅಧ್ಯಕ್ಷರು ಅಥವಾ ಸಂಸ್ಥೆಯ ಕಾರ್ಯನಿರ್ವಾಹಕ ಅಧಿಕಾರಿಗಳು ಅಭಿವೃದ್ಧಿ ಸಮಿತಿಯ ಖಜಾಂಚಿಗಳಾಗಿರತಕ್ಕದ್ದು. ಸಂಸ್ಥೆಯಲ್ಲಿ ಕಾರ್ಯನಿರ್ವಾಹಕ ಅಧಿಕಾರಿಗಳು ಲಭ್ಯವಿಲ್ಲದಿದ್ದಲ್ಲಿ ಹಾಗೂ ವ್ಯವಸ್ಥಾಪನಾ ಸಮಿತಿಯ ಅಧ್ಯಕ್ಷರ ಗೈರುಹಾಜರಿಯಲ್ಲಿ ಇಲಾಖೆಯ ಅಥವಾ ಯಾವುದೇ ಇತರ ಇಲಾಖೆಯ ಯಾರೇ ಅಧಿಕಾರಿಯನ್ನು ಖಜಾಂಚಿಯನ್ನಾಗಿ ನೇಮಕ ಮಾಡಬಹುದು.

(3) ಅಭಿವೃದ್ಧಿ ಸಮಿತಿಯನ್ನು ಮೂರು ವರ್ಷಗಳನ್ನು ಮೀರದಂತೆ ನಿರ್ದಿಷ್ಟ ಅವಧಿಗೆ ನಿಯಮಿಸಲಾದ ಪ್ರಾಧಿಕಾರವು ರಚಿಸಬಹುದು, ನಿರ್ದಿಷ್ಟಪಡಿಸಿದ ಅವಧಿಯೊಳಗೆ ಕಾಮಗಾರಿಯು ಪೂರ್ಣಗೊಳ್ಳದಿದ್ದಲ್ಲಿ ನಿಯಮಿಸಲಾದ ಪ್ರಾಧಿಕರವು ಸಮಿತಿಯನ್ನು ರದ್ದುಪಡಿಸಬಹುದು ಮತ್ತು

ಸಂದರ್ಭಗಳು ಅಪೇಕ್ಷಿತವಾಗಿರುವಂತೆ ಹೊಸ ಸಮಿತಿಯನ್ನು ರಚಿಸಬಹುದು. ಆದಾಗ್ಯೂ ಆದೇಶದಲ್ಲಿ ದಾಖಲಿಸಬೇಕಾದ ಯುಕ್ತ ಕಾರಣಗಳಿಗಾಗಿ ಸಮಿತಿಯ ಅವಧಿಯನ್ನು ವಿಸ್ತರಿಸಬಹುದು.

(4) ಕಾರ್ಯದರ್ಶಿ ಮತ್ತು ಖಜಾಂಚಿಯವರುಗಳು ಪತ್ರ ವ್ಯವಹಾರಗಳನ್ನು ಮತ್ತು ಅಭಿವೃದ್ಧಿ ಸಮಿತಿಯು ಸಂಗ್ರಹಣೆ ಮತ್ತು ಭರಿಸುವ ವೆಚ್ಚಗಳಿಗೆ ಸಂಬಂಧಿಸಿದಂತೆ ಲೆಕ್ಕಪತ್ರಗಳ ನಿರ್ವಹಣೆಯನ್ನು ನೋಡಿಕೊಳ್ಳತಕ್ಕದ್ದು.

(5) ಅಭಿವೃದ್ಧಿ ಸಮಿತಿಯ ಸಭೆಯನ್ನು ಅವಶ್ಯಕತೆ ಬಂದಾಗಲೆಲ್ಲಾ ಕಾರ್ಯದರ್ಶಿಯವರು ನಡೆಸತಕ್ಕದ್ದು ಮತ್ತು ಕನಿಷ್ಠ ತಿಂಗಳಿಗೊಮ್ಮೆಯಾದರೂ ಸಭೆಯನ್ನು ನಡೆಸತಕ್ಕದ್ದು ಹಾಗೂ ಸಂಗ್ರಹಣೆ ಮತ್ತು ಭರಿಸಲಾದ ವೆಚ್ಚಗಳ ಲೆಕ್ಕಪತ್ರಗಳನ್ನು ಒಳಗೊಂಡಂತೆ ಜೀರ್ಣೋದ್ಧಾರ ಕಾಮಗಾರಿಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಸಭೆಯಲ್ಲಿ ಮಂಡಿಸತಕ್ಕದ್ದು.

(6) ನಿರ್ದಿಷ್ಟವಾಗಿ ಈ ಉದ್ದೇಶಕ್ಕಾಗಿ ಮುದ್ರಿಸಿದ ಕ್ರಮ ಸಂಖ್ಯೆಗಳೊಂದಿಗಿನ ಪಕ್ಕಾ ಪ್ರತಿಗಳೊಂದಿಗೆ ಮುದ್ರಿಸಿದ ಸ್ವೀಕೃತಿಗಳನ್ನು ನೀಡುವ ಮೂಲಕ ವಂತಿಗೆಯ ಸಂಗ್ರಹಣೆಯನ್ನು ಮಾಡತಕ್ಕದ್ದು ಸ್ವೀಕೃತಿ ಪುಸ್ತಕಗಳು ಖಜಾಂಚಿಯವರ ಅಭಿರಕ್ಷೆಯಲ್ಲಿರತಕ್ಕದ್ದು ಹಾಗೂ ಈತನು ಪಕ್ಕಾ ಪ್ರತಿಗಳನ್ನು ಉಳಿಕೊಳ್ಳುವ ಸ್ವೀಕೃತಿಗಳನ್ನು ನೀಡತಕ್ಕದ್ದು.

(7) ಸಂಗ್ರಹಿಸಲಾದ ದೇಣಿಗೆಯನ್ನು, ಅಭಿವೃದ್ಧಿ ನಿಧಿಯಂತೆ ದೇವಾಲಯದ ಹೆಸರಿನಲ್ಲಿ ಈ ಉದ್ದೇಶಕ್ಕಾಗಿಯೇ ತೆರೆಯಲಾದ ಪ್ರತ್ಯೇಕ ಲೆಕ್ಕ ಖಾತೆಯನ್ನು ರಾಷ್ಟ್ರೀಕೃತ ಬ್ಯಾಂಕ್ ಅಥವಾ ಸರ್ಕಾರವು ಪ್ರಾಧಿಕರಿಸಿದ ಯಾವುದೇ ಇತರ ಬ್ಯಾಂಕಿನಲ್ಲಿ ಠೇವಣಿ ಇಡತಕ್ಕದ್ದು, ಹಣವನ್ನು ಪಡೆಯುವುದು ಅಗತ್ಯವಾದಾಗಲೆಲ್ಲಾ ಖಜಾಂಚಿಯವರು ಸದರಿ ಮೊಬಲಗನ್ನು ಸಮಿತಿಯ ನಿರ್ಣಯದ ಮೂಲಕ ಸಮಿತಿಯ ಖಜಾಂಚಿ ಮತ್ತು ಕಾರ್ಯದರ್ಶಿಗಳ ಜಂಟಿ ಸಹಿಯಲ್ಲಿ ಪಡೆಯುವುದು.

(8) ಅಭಿವೃದ್ಧಿ ಸಮಿತಿಯು ಕೈಗೊಳ್ಳಬೇಕಾದ ಪ್ರಸ್ತಾಪಿತ ಕಾಮಗಾರಿಗಳು ಮತ್ತು ಸಕ್ಷಮ ಪ್ರಾಧಿಕಾರಕ್ಕೆ ಅವುಗಳ ವೆಚ್ಚವನ್ನು ಭರಿಸುವ ಸಂಪನ್ಮೂಲ, ಲೋಕೋಪಯೋಗಿ ಇಲಾಖೆ ಅಥವಾ ಇತರ ಸರ್ಕಾರಿ ಏಜೆನ್ಸಿಗಳ ತಾಂತ್ರಿಕ ಅಭಿಪ್ರಾಯ ನಮೂದುಗಳ ವಿವರಗಳೊಂದಿಗೆ ಪ್ರಸ್ತಾವಿತ ಕಾಮಗಾರಿಯ ನಕ್ಷೆ ಮತ್ತು ಅಂದಾಜನ್ನು ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.

(9) ಸಕ್ಷಮ ಪ್ರಾಧಿಕಾರವು, ವಿಧಿಸಬಹುದಾದಂತಹ ಷರತ್ತುಗಳೊಂದಿಗೆ 40ಎ ನಿಯಮಗಳಡಿಯಲ್ಲಿ ನಮೂದಿಸಲಾದಂತೆ ಪ್ರಸ್ತಾವನೆಯನ್ನು ಸತ್ಯಾಪನೆ ಮಾಡಿದ ತರುವಾಯ ಅಂದಾಜು ಮತ್ತು ನಕ್ಷೆಯನ್ನು ಮಂಜೂರು ಮಾಡಬಹುದು.

(10) ಅಭಿವೃದ್ಧಿ ಸಮಿತಿಯ ಲೆಕ್ಕಪತ್ರಗಳನ್ನು ಸ್ವೀಕೃತಿಗಳು ಮತ್ತು ವೋಚರ್‌ಗಳು, ಅಳತೆ ಪುಸ್ತಕ, ಟೆಂಡರ್ ದಸ್ತಾವೇಜುಗಳು, ಅನುಮೋದಿತ ನಕ್ಷೆ ಮತ್ತು ಅಂದಾಜು, ನಗದು ಪುಸ್ತಕಗಳು, ಬ್ಯಾಂಕ್ ವ್ಯವಹಾರ ಮೌಲ್ಯಮಾಪನ ವರದಿ ಮತ್ತು ಸಂದಾಯ ಮಾಡಿದ ಅಂತಿಮ ಬಿಲ್ಲುಗಳು ಮತ್ತು ಅಂತಹ ಇತರ ದಾಖಲೆಗಳೊಂದಿಗೆ ಸಮಿತಿಯ ಕಾರ್ಯದರ್ಶಿಗಳು ಮತ್ತು ಖಾಜಾಂಚಿಗಳು ನಿರ್ವಹಿಸತಕ್ಕದ್ದು ಹಾಗೂ ಲೆಕ್ಕಪತ್ರಗಳ ಉದ್ದೇಶಕ್ಕಾಗಿ ಸದರಿ ದಾಖಲೆಗಳನ್ನು ಹಾಜರುಪಡಿಸತಕ್ಕದ್ದು.

(11) ಲೆಕ್ಕ ಪರಿಶೋಧಕರು ಅಭಿವೃದ್ಧಿ ಸಮಿತಿಯ ಲೆಕ್ಕಪತ್ರಗಳನ್ನು ಲೆಕ್ಕ ಪರಿಶೋಧಿಸತಕ್ಕದ್ದು ಮತ್ತು ಲೆಕ್ಕಪತ್ರಗಳ ನಿರ್ವಹಣೆಯಲ್ಲಿ ಯಾವುದೇ ದೋಷಗಳಿದ್ದಲ್ಲಿ ಹಾಗೂ ಅಂತಹ ಇತರೆ ಪರಿಶೀಲನೆಯೊಂದಿಗೆ ಅಧ್ಯಕ್ಷರು ಅಥವಾ ಸಮಿತಿಯ ಸದಸ್ಯರುಗಳ ನಿರ್ಲಕ್ಷ್ಯದಿಂದ ಉಂಟಾದ ನಷ್ಟ ಹಾಗೂ ಹೆಚ್ಚುವರಿ ಸಂದಾಯ ಅಥವಾ ದುರ್ವಿನಿಯೋಗಗಳಿಂದಾಗಿ ಸಂಸ್ಥೆಗೆ ಯಾವುದೇ ಹೆಚ್ಚಿನ ನಷ್ಟ ಉಂಟಾಗಿದ್ದಲ್ಲಿ ಆತನು ತನ್ನ ಅಭಿಪ್ರಾಯದೊಂದಿಗೆ ವರದಿಯನ್ನು ಸಲ್ಲಿಸತಕ್ಕದ್ದು.

(12) ಲೆಕ್ಕಪರಿಶೋಧನಾ ವರದಿಯನ್ನು ಸ್ವೀಕರಿಸಿದ ಮೇಲೆ ಸಕ್ಷಮ ಪ್ರಾಧಿಕಾರಿಯು, ಲೆಕ್ಕ ಪರಿಶೋಧನಾ ವರದಿಯಲ್ಲಿ ಮಾಡಿದ ಪರಿಶೀಲನಾಂಶಗಳನ್ನು ಪಾಲಿಸಲು ಸಮಿತಿಯ ಅಧ್ಯಕ್ಷರು, ಕಾರ್ಯದರ್ಶಿ, ಖಜಾಂಚಿಗಳಿಗೆ ನೋಟೀಸನ್ನು ನೀಡತಕ್ಕದ್ದು ಮತ್ತು ಆತನು ನಿರ್ದಿಷ್ಟಪಡಿಸಬಹುದಾದಂತಹ ಸಮಯದೊಳಗೆ ಅವರ ನಿರ್ಲಕ್ಷ್ಯದಿಂದ ಉಂಟಾದ ನಷ್ಟವನ್ನು ವಸೂಲಿ ಮಾಡಲಾಗದಿದ್ದಲ್ಲಿ ಅಥವಾ ನಷ್ಟಕ್ಕೆ ಹೊಣೆಗಾರನಾದ ಯಾರೇ ವ್ಯಕ್ತಿಯು ನಿರ್ದೇಶನಗಳನ್ನು ಪಾಲಿಸಲು ವಿಫಲನಾದಲ್ಲಿ, ಸದರಿ ಮೊಬಲಗನ್ನು ಅಧಿನಿಯಮದ 60ನೇ ಪ್ರಕರಣದಡಿಯಲ್ಲಿ ವಿಧಿಸಿದ ಪ್ರಕ್ರಿಯೆಗನುಸಾರವಾಗಿ ಸಂಬಂಧಪಟ್ಟವರಿಂದ ವಸೂಲಿ ಮಾಡಬಹುದು.

**40ಸಿ. ವಾಸ್ತುಶಿಲ್ಪ ಸಮಿತಿಯ ಸರ್ಕಾರೇತರ ಸದಸ್ಯರ ವಿದ್ಯಾರ್ಹತೆ ಮತ್ತು ವಯಸ್ಸು ಈ ಮುಂದಿನಂತೆ ಇರತಕ್ಕದ್ದು.–**

(1) ಸ್ಥಪತಿ : ಯಾವುದೇ ಪ್ರಸಿದ್ಧ ಸಂಸ್ಥೆಯಲ್ಲಿ ಶಿಲ್ಪಕಲೆಯ ತರಬೇತಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದ ಪ್ರಮಾಣ ಪತ್ರವನ್ನು ಹೊಂದಿರತಕ್ಕದ್ದು ಮತ್ತು ಹತ್ತು ವರ್ಷಗಳ ಕಾಲ ಶಿಲ್ಪ ಹಾಗೂ ಸಿಮೆಂಟ್ ಮೂರ್ತಿಗಳನ್ನು ಸಿದ್ಧಪಡಿಸುವಲ್ಲಿ ಶಿಲ್ಪಕಲೆ ಪ್ರಾಯೋಗಿಕ ಅನುಭವವನ್ನು ಹೊಂದಿರತಕ್ಕದ್ದು ಮತ್ತು ಶಿಲ್ಪಶಾಸ್ತ್ರದಲ್ಲಿ ಮತ್ತು ನಕ್ಷೆಯನ್ನು ಸಿದ್ಧಪಡಿಸುವಲ್ಲಿ ನುರಿತವರಾಗಿರತಕ್ಕದ್ದು.

(2) ಆಗಮ ತಜ್ಞ : ಸರ್ಕಾರದಿಂದ ಮಾನ್ಯತೆ ಪಡೆದ ಯಾವುದೇ ಶಾಸ್ತ್ರದಲ್ಲಿನ ವಿದ್ವತ್ ಉತ್ತಮ ಪರೀಕ್ಷೆಯೊಂದಿಗೆ ಯಾವುದೇ ಆಗಮದಲ್ಲಿ ಪ್ರವೀಣ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು. ಧಾರ್ಮಿಕ ಸಂಸ್ಥೆ ಮತ್ತು

ಧರ್ಮಾದಾಯ ದತ್ತಿ ಇಲಾಖೆಯಲ್ಲಿ ಆಗಮ ಪಂಡಿತ ಅಥವಾ ಆಗಮ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸರತಕ್ಕದ್ದು.

(3) ವಾಸ್ತುತಜ್ಞ : ಜೋತಿಷ್ಯ ಶಾಸ್ತ್ರದಲ್ಲಿ ವಿದ್ವತ್ ಉತ್ತಮ ಪರೀಕ್ಷೆಯಲ್ಲಿ ಉತ್ತೀರ್ಣನಾಗಿರತಕ್ಕದ್ದು ಮತ್ತು ಹತ್ತು ವರ್ಷಗಳ ಕಾಲ ದೇವಾಲಯದ ವಾಸ್ತುಶಿಲ್ಪದಲ್ಲಿ ಪ್ರಾಯೋಗಿಕ ಅನುಭವವಿರಬೇಕು.

(4) ನಾಮನಿರ್ದೇಶಿಸಬೇಕಾದ ಸರ್ಕಾರೇತರ ಸದಸ್ಯರುಗಳು 35 ವರ್ಷಗಳ ವಯಸ್ಸಾಗಿರತಕ್ಕದ್ದು

**(5) ವಾಸ್ತುಶಿಲ್ಪ ಸಮಿತಿಯ ಕಾರ್ಯದರ್ಶಿ:** ಕಾರ್ಯನಿರ್ವಾಹಕ ಅಭಿಯಂತರರು ಅಥವಾ ಆತನ ಗೈರುಹಾಜರಿಯಲ್ಲಿ ಆಯುಕ್ತನ ಕಛೇರಿಯ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರನ್ನು ವಾಸ್ತುಶಿಲ್ಪ ಸಮಿತಿಯ ಕಾರ್ಯದರ್ಶಿಯಾಗಿ ನೇಮಕ ಮಾಡತಕ್ಕದ್ದು.

**(6) ವಾಸ್ತುಶಿಲ್ಪ ಸಮಿತಿಯ ಕಾರ್ಯವಿಧಾನ, ಅಧಿಕಾರಗಳು ಮತ್ತು ಕರ್ತವ್ಯಗಳು:**

(ಎ) ವಾಸ್ತುಶಿಲ್ಪ ಸಮಿತಿಯ ನಿಯತ ಸಭೆಯನ್ನು ಕನಿಷ್ಠ ಮೂರು ತಿಂಗಳಿಗೊಮ್ಮೆ ನಡೆಸತಕ್ಕದ್ದು, ಸಂದರ್ಭಾನುಸಾರ ಅಥವಾ ಅಧ್ಯಕ್ಷನ ಸೂಚನೆ ಮೇರೆಗೆ, ವಿಶೇಷ ಸಭೆಯನ್ನು ಕೂಡ ನಡೆಸಬಹುದು

(ಬಿ) ಸಭೆಯ ನೋಟೀಸನ್ನು, ಅಧ್ಯಕ್ಷರ ಅನುಮೋದನೆಯೊಂದಿಗೆ ಸಭೆಯಲ್ಲಿ ಚರ್ಚಿಸಬೇಕಾದ ಕಾರ್ಯಸೂಚಿಯೊಂದಿಗೆ, ಏಳು ದಿನಗಳಿಗೆ ಮುಂಚಿತವಾಗಿ ಕಾರ್ಯದರ್ಶಿಯವರು ವಾಸ್ತುಶಿಲ್ಪ ಸಮಿತಿಯ ಸದಸ್ಯರುಗಳಿಗೆ ಕಳುಹಿಸಬೇಕು.

(ಸಿ) ಸಮಿತಿಯ ಪ್ರತಿಯೊಂದು ಸಭೆಗೆ ಅಧ್ಯಕ್ಷರು ಅಧ್ಯಕ್ಷತೆ ವಹಿಸಬಹುದು.

(ಡಿ) ಸಮಿತಿಯ ಕಾರ್ಯದರ್ಶಿಯವರು ಪ್ರಸ್ತಾಪಿತ ಕಾಮಗಾರಿಯ ಶಿಲ್ಪಕಲೆ, ವಾಸ್ತುಶಿಲ್ಪ ಮತ್ತು ವಾಸ್ತು ವೈಶಿಷ್ಟಗಳ ಬಗ್ಗೆ ಸಮಿತಿಯ ಮುಂದೆ ಅದರ ಅಭಿಪ್ರಾಯಕ್ಕಾಗಿ ಎಲ್ಲಾ ಪ್ರಸ್ತಾವನೆಗಳನ್ನು ಮಂಡಿಸಬಹುದು.

(ಇ) ಸಮಿತಿಯು ಪ್ರತಿಯೊಂದು ಪ್ರಸ್ತಾವನೆಯನ್ನು ಪರಿಶೀಲಿಸಿ, ಪ್ರಸ್ತಾವವನ್ನು ಮಂಜೂರಾತಿಗಾಗಿ ಅಂಗೀಕರಿಸಬಹುದೇ ಎಂಬುದಕ್ಕೆ ತನ್ನ ಅಭಿಪ್ರಾಯವನ್ನು ನೀಡಬಹುದು. ಪ್ರಸ್ತಾವನೆಯು ಸಮಿತಿಯಿಂದ ಅಂಗೀಕೃತವಾಗದಿದ್ದಲ್ಲಿ ಪ್ರಸ್ತಾವನೆಯಲ್ಲಿನ ಯಾವುದೇ ಲೋಪಗಳನ್ನು ಸರಿಪಡಿಸುವ ಆಕ್ಷೇಪಣೆಯೊಂದಿಗೆ ತನ್ನ ಅಭಿಪ್ರಾಯವನ್ನು ದಾಖಲು ಮಾಡಬಹುದು.

(ಎಫ್) ಅದಾದ ತರುವಾಯ ವಾಸ್ತುಶಿಲ್ಪ ಸಮಿತಿಯು ತೋರಿಸಿದ ಲೋಪಗಳನ್ನು ಸರಿಪಡಿಸಲು ಸಂಬಂಧಪಟ್ಟ ಸಂಸ್ಥೆ ಅಥವಾ ಸಂದರ್ಭಾನುಸಾರವಾಗಿ ಸ್ಥಳೀಯ ಪ್ರಾಧಿಕಾರಕ್ಕೆ ಪ್ರಸ್ತಾವವನ್ನು ಕಳುಹಿಸಬಹುದು. ವ್ಯವಸ್ಥಾಪನಾ ಸಮಿತಿಯ ಅಧ್ಯಕ್ಷ ಅಥವಾ ಕಾರ್ಯನಿವಾಹಕ ಅಧಿಕಾರಿ ವಾಸ್ತುಶಿಲ್ಪ ಸಮಿತಿಯ ಆಕ್ಷೇಪಣೆಯನ್ನು ಸರಿಪಡಿಸಬಹುದು ಮತ್ತು ಸಕ್ಷಮ ಪ್ರಾಧಿಕಾರಕ್ಕೆ ಮಂಜೂರಾತಿಗಾಗಿ ಪ್ರಸ್ತಾವನೆಯನ್ನು ಪುನಃ ಸಲ್ಲಿಸಬಹುದು. ಸಕ್ಷಮ ಪ್ರಾಧಿಕಾರವು ಪ್ರಸ್ತಾವನೆಯನ್ನು ಮತ್ತೆ ವಾಸ್ತುಶಿಲ್ಪ ಸಮಿತಿಯ ಮುಂದೆ ಅದರ ತೀರಿಕೆಗಾಗಿ (ಕ್ಲಿಯರೆನ್ಸ್‌ಗಾಗಿ) ಮಂಡಿಸಬಹುದು ಮತ್ತು ವಾಸ್ತುಶಿಲ್ಪ ಸಮಿತಿಯಿಂದ ತೀರಿಕೆಯನ್ನು ಪಡೆದ ತರುವಾಯ ಯುಕ್ತ ಉಪಬಂಧದ ಅಡಿಯಲ್ಲಿ ಹೇಳಲಾದಂತೆ ಸಕ್ಷಮ ಪ್ರಾಧಿಕಾರವು ಪ್ರಸ್ತಾವನೆಗೆ ಮಂಜೂರಾತಿಯನ್ನು ನೀಡಬಹುದು.

(ಜಿ) ವಾಸ್ತುಶಿಲ್ಪ ಸಮಿತಿಯ ಅಧಿಕಾರೇತರ ಸದಸ್ಯನು ಸರ್ಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸುವ (ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 2/ಎಸ್‌ಆರ್‌ಪಿ/2000, ದಿನಾಂಕ:03-02-2001) ಪ್ರವಾಸ ಭತ್ಯೆಯನ್ನು ಪಡೆಯಲು ಅರ್ಹನಾಗಿರತಕ್ಕದ್ದು.

**40ಡಿ. ಅಧಿಸೂಚಿತ ಸಂಸ್ಥೆಗಳಲ್ಲಿ ಜಾತ್ರೆ ನಡೆಯುವಾಗ ಲಭ್ಯವಾಗುವ ಜಾನುವಾರು ಗೊಬ್ಬರ ಮತ್ತು ಅಂಗಡಿಗಳನ್ನು ಹಾಗೂ ಯಕ್ಷಗಾನ ಮೇಳ ನಡೆಸುವ ಹಕ್ಕಿನ ನಿಯಂತ್ರಣ ಮತ್ತು ಬಳಸಲಾದ ವಸ್ತು ಮತ್ತು ಸೀರೆ ಇತ್ಯಾದಿಗಳ ವಿಲೆ.–**

(1) ದೇವಸ್ಥಾನದಲ್ಲಿ ಮುಡಿಯ ಮೇಲೆ ಶುಲ್ಕ ಸಂಗ್ರಹ ಇತ್ಯಾದಿ, ಜಾತ್ರೆ ನಡೆಯುವಾಗ ಅಂಗಡಿಗಳು ಮತ್ತು ಜಾನುವಾರು ಗೊಬ್ಬರದ ಹಕ್ಕನ್ನು ಹಾಗೂ ಯಕ್ಷಗಾನ (ಸಾಂಸ್ಕೃತಿಕ ಕಾರ್ಯಕ್ರಮಗಳ) ಪ್ರದರ್ಶನಕ್ಕೆ ಶುಲ್ಕವನ್ನು ಸಂಗ್ರಹಿಸುವ ಹಕ್ಕನ್ನು ಸಾರ್ವಜನಿಕ ಹರಾಜಿನ ಮೂಲಕ ಅಥವಾ ಸ್ಥಳೀಯ ದಿನ ಪತ್ರಿಕೆಗಳಲ್ಲಿ ವ್ಯಾಪಕ ಪ್ರಚಾರ ಅಥವಾ 22ನೇ ನಿಯಮದ (2)ನೇ ಉಪ ನಿಯಮದಡಿಯಲ್ಲಿ ನಿರ್ದಿಷ್ಟಪಡಿಸಿದ ರೀತಿಯಲ್ಲಿ ಪ್ರಕಟಿಸಿದ ತರುವಾಯ ಸೀಲು ಮಾಡಿದ ಟೆಂಡರುಗಳ ಮೂಲಕ ವಹಿಸಿಕೊಡಬಹುದು.

(2) (1)ನೇ ಉಪನಿಯಮದ ಅಡಿಯಲ್ಲಿ ಶುಲ್ಕವನ್ನು ಸಂಗ್ರಹಿಸುವ ಹರಾಜನ್ನು ಸಕ್ಷಮ ಪ್ರಾಧಿಕಾರದ ಅಥವಾ ಅದು ಅಧಿಕೃತಗೊಳಿಸಿದ ಯಾವೊಬ್ಬ ಅಧಿಕಾರಿಯ ಹಾಜರಿಯಲ್ಲಿ ನಡೆಸಬಹುದು.

(3) ಟೆಂಡರ್ ಅಥವಾ ಹರಾಜಿನ ಅಧಿಸೂಚನೆಯನ್ನು ದೇವಸ್ಥಾನದ ಪ್ರಾಧಿಕಾರವು ಈ ಬಗ್ಗೆ ಅದು ನಿಯಮಿಸಬಹುದಾದಂತೆ ಪ್ರಕಟಿಸಬಹುದು.

(4) ನಿಯಮಿಸಲಾದ ಪ್ರಾಧಿಕಾರವು ಹರಾಜನ್ನು ಸ್ಥಿರೀಕರಿಸುವಾಗಿನ ಆದೇಶದಲ್ಲಿ ವಿಧಿಸಬಹುದಾದ ಷರತ್ತುಗಳಿಗೊಳಪಟ್ಟು, ಅತಿ ಹೆಚ್ಚಿನ ಬಿಡ್‌ದಾರ ಅಥವಾ ಟೆಂಡರ್‌ದಾರನ ಪರವಾಗಿ ಸ್ಥಿರೀಕರಿಸಬಹುದು.

(5) ನಿಯಮಿಸಲಾದ ಪ್ರಾಧಿಕಾರವು ಲಿಖಿತದಲ್ಲಿ ದಾಖಲಿಸಬಹುದಾದ ಸಾಕಷ್ಟು ಕಾರಣಕ್ಕಾಗಿ ಹರಾಜನ್ನು ತಿರಸ್ಕರಿಸಬಹುದು. ಆಗ ಹಕ್ಕನ್ನು ಮರು ಹರಾಜು ಮಾಡತಕ್ಕದ್ದು ಮತ್ತು ಹಿಂದಿನ ಅತಿ ಹೆಚ್ಚಿನ ಬಿಡ್‌ದಾರನು ಠೇವಣಿ ಇರಿಸಿದ ಮೊಬಲಗನ್ನು ಅತನಿಗೆ ಹಿಂತಿರುಗಿಸತಕ್ಕದ್ದು.

(6) ಯಶಸ್ವಿ ಸವಾಲುದಾರನು (ಬಿಡ್‌ದಾರನು) ಹರಾಜು/ಟೆಂಡರ್ ಮೊಬಲಗಿನ ನಾಲ್ಕನೇ ಒಂದು ಭಾಗವನ್ನು ಹರಾಜಿನ ಸ್ಥಳದಲ್ಲಿ ಮತ್ತು ಉಳಿದ ಮೊಬಲಗನ್ನು ಹರಾಜಿನ ಹದಿನೈದು ದಿನಗಳೊಳಗೆ ಸಂದಾಯ ಮಾಡತಕ್ಕದ್ದು. ಅದಕ್ಕೆ ತಪ್ಪಿದಲ್ಲಿ, ಪ್ರಾರಂಭಿಕ ಮೊಬಲಗನ್ನು ಸಂಸ್ಥೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಹಕ್ಕನ್ನು ಎರಡನೇ ಅತಿ ಹೆಚ್ಚಿನ ಸವಾಲುದಾರನ (ಬಿಡ್‌ದಾರನ) ಪರವಾಗಿ ಸ್ಥಿರೀಕರಿಸಬಹುದು ಅಥವಾ ಸಂದರ್ಭಗಳು ಸಮರ್ಥಿಸಬಹುದಾದಂತೆ ಮರು ಹರಾಜು ಮಾಡಬಹುದು.

(7) ಯಶಸ್ವಿ ಸವಾಲುದಾರನು ಸ್ಥಿರೀಕರಣೆಯ ತರುವಾಯ ಸವಾಲು ಮೊಬಲಗನ್ನು ಸಂದಾಯ ಮಾಡಲು ತಪ್ಪಿದಲ್ಲಿ, ಅದನ್ನು ಭೂ ಕಂದಾಯ ಬಾಕಿಯಂತೆ ವಸೂಲು ಮಾಡಬಹುದು.

(8) ಆಭರಣಗಳನ್ನು ಹೊರತುಪಡಿಸಿ ಬಳಸಲಾಗದ ವಸ್ತುಗಳು, ಪಾತ್ರೆಗಳು ಮತ್ತು ಸೀರೆಗಳು ಮುಂತಾದವುಗಳನ್ನು ಮೇಲೆ ನಿರ್ದಿಷ್ಟಪಡಿಸಿದ ರೀತಿಯಲ್ಲಿ ಸಾರ್ವಜನಿಕ ಹರಾಜಿನ ಮೂಲಕ ವಿಲೆ ಮಾಡಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಉಮಾಪತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

**ನಮೂನೆ – I (ಎ)**

**(22ನೇ ನಿಯಮ)**

. . . . . . . . . . ಜಿಲ್ಲೆಯ . . . . . . ತಾಲ್ಲೂಕಿನ . . . . . . . . . . . . . . ಗ್ರಾಮದ ಶ್ರೀ . . . . . . . . . . . .. . . . . ದೇವಸ್ಥಾನದ ವ್ಯವಸ್ಥಾಪನಾ ಸಮಿತಿಯ ಸದಸ್ಯತ್ವಕ್ಕಾಗಿ ಅರ್ಜಿಯನ್ನು ಆಹ್ವಾನಿಸುವ ಪ್ರಕಟಣೆ.

. . . . . . . . . . ಜಿಲ್ಲೆಯ . . . . . . ತಾಲ್ಲೂಕಿನ . . . . . . . . . . . . ಗ್ರಾಮದ ಶ್ರೀ . . . . . . . . . . . .. . . . ದೇವಸ್ಥಾನಕ್ಕೆ ಮೂರು ವರ್ಷಗಳ ಅವಧಿಗಾಗಿ ಒಂಭತ್ತು ಜನ ಸದಸ್ಯರನ್ನು ಒಳಗೊಂಡ ವ್ಯವಸ್ಥಾಪನಾ ಸಮಿತಿಯನ್ನು ರಚಿಸುವುದಕ್ಕಾಗಿ ಆಸಕ್ತಿವುಳ್ಳ ಭಕ್ತಾಧಿಗಳಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ.

1. ದೇವಸ್ಥಾನ ಪ್ರಕರಣದಲ್ಲಿ ಪ್ರಧಾನ ಅರ್ಚಕ ಅಥವಾ ಅರ್ಚಕ
2. ಅನುಸೂಚಿತ ಜಾತಿ/ಅನುಸೂಚಿತ ಬುಡಕಟ್ಟುಗಳಿಗೆ ಸೇರಿದ ಕನಿಷ್ಠ ಒಬ್ಬ ಸದಸ್ಯ
3. ಇಬ್ಬರು ಮಹಿಳೆಯರು
4. ಅರ್ಜಿದಾರನು –
   - (i) ದೇವರಲ್ಲಿ ನಂಬಿಕೆಯುಳ್ಳವನಾಗಿರತಕ್ಕದ್ದು;
   - (ii) ಇಪ್ಪತ್ತೈದು ವರ್ಷದವನಾಗಿರತಕ್ಕದ್ದು;
   - (iii) ಒಳ್ಳೆಯ ನಡತೆ ಮತ್ತು ಖ್ಯಾತಿಯನ್ನು ಹೊಂದಿರತಕ್ಕದ್ದು ಹಾಗೂ ಆ ಸ್ಥಳೀಯವಾಗಿ ಗೌರವವುಳ್ಳವನಾಗಿರತಕ್ಕದ್ದು;
   - (iv) ಅಧಿನಿಯಮದ 25ನೇ ಪ್ರಕರಣದ (5)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಅನರ್ಹತೆಗಳನ್ನು ಹೊಂದಿರತಕ್ಕದ್ದಲ್ಲ.
5. ಅರ್ಜಿಗಳನ್ನು ಈ ಪ್ರಕಟಣೆಯ ದಿನಾಂಕದಿಂದ ಹದಿನೈದು (15) ದಿನಗಳೊಳಗೆ ಈ ಕೆಳಗೆ ಸಹಿ ಮಾಡಿರುವವರಿಗೆ ನಿಯಮಿಸಲಾದ ನಮೂನೆಯಲ್ಲಿ ಕಳುಹಿಸತಕ್ಕದ್ದು. ಆ ನಂತರ ಸಲ್ಲಿಸಲಾದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಕಾರ್ಯದರ್ಶಿ

ರಾಜ್ಯ ಧಾರ್ಮಿಕ ಪರಿಷತ್ತು/

ಕಾರ್ಯದರ್ಶಿ

ಜಿಲ್ಲಾ ಧಾರ್ಮಿಕ ಪರಿಷತ್ತು

. . . . . ಜಿಲ್ಲೆ

**ನಮೂನೆ – I(ಬಿ)**

(22ನೇ ನಿಯಮ)

. . . . . . . . . ಜಿಲ್ಲೆಯ . . . . . . ತಾಲ್ಲೂಕಿನ . . . . . . . . . . . . . . ಗ್ರಾಮದ ಶ್ರೀ . . . . . . . . . . . .. . . . . ದೇವಸ್ಥಾನದ ವ್ಯವಸ್ಥಾಪನ ಸಮಿತಿಯ ಸದಸ್ಯತ್ವಕ್ಕಾಗಿ ಅರ್ಜಿ.

ಇವರಿಗೆ
ಕಾರ್ಯದರ್ಶಿಗಳು,
ಕರ್ನಾಟಕ ಧಾರ್ಮಿಕ ಪರಿಷತ್ತು ಮತ್ತು
ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ,
ಮಲ್ಯೆ ಮಹದೇಶ್ವರ ಸ್ವಾಮಿ ವಾರ್ತಾ ಭವನ
ಎ.ವಿ.ರಸ್ತೆ, ಚಾಮರಾಜಪೇಟೆ, ಬೆಂಗಳೂರು – 560 018.

ಕಾರ್ಯದರ್ಶಿಗಳು
ಜಿಲ್ಲಾ ಧಾರ್ಮಿಕ ಪರಿಷತ್ತು ಮತ್ತು ಸಹಾಯಕ ಆಯುಕ್ತರು
ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳು
. . . . . . . . .ಜಿಲ್ಲೆ/ ದತ್ತಿಗಳ
ತಹಸೀಲ್ದಾರ್‌ರು ಜಿಲ್ಲಾಧಿಕಾರಿಗಳ ಕಛೇರಿ
. . . . . . . . ಜಿಲ್ಲೆ.

1. ಅರ್ಜಿದಾರರ ಹೆಸರು ಮತ್ತು ವಿಳಾಸ :

2. ತಂದೆಯ/ಗಂಡನ ಹೆಸರು :

3. ವಯಸ್ಸು ಮತ್ತು ಹುಟ್ಟಿದ ದಿನಾಂಕ :

4. ವಿದ್ಯಾರ್ಹತೆ :

5. ಧರ್ಮ/ಜಾತಿ :

6. ನಾಮನಿರ್ದೇಶನಕ್ಕಾಗಿ ಅರ್ಜಿದಾರರು ಅರ್ಜಿಯನ್ನು ಸಲ್ಲಿಸುವ ಪ್ರವರ್ಗ (ಸಾಮಾನ್ಯ/ಅ.ಜಾ/ಅ.ಬು/ಮಹಿಳೆ/ಅರ್ಚಕ) (ಅ.ಜಾ/ಅ.ಬು ಪ್ರಕರಣಗಳಲ್ಲಿ ತಹಸೀಲ್ದಾರರು ನೀಡಿರುವ ಪ್ರಮಾಣ ಪತ್ರವನ್ನು ಲಗತ್ತಿಸುವುದು) :

7. ನ್ಯಾಯಾಲಯದಿಂದ ಆತನನ್ನು ಅವಿಮುಕ್ತ ದಿವಾಳಿಯೆಂದು ಘೋಷಿಸಲಾಗಿದೆಯೇ? ಅಥವಾ ಆತನು ನೈತಿಕ ಅಧ:ಪತನವನ್ನು ಒಳಗೊಂಡಿರುವ ಅಪರಾಧಕ್ಕಾಗಿ ಆತನಿಗೆ ಶಿಕ್ಷೆಯನ್ನು ವಿಧಿಸಲಾಗಿದೆಯೇ? :

8. ಆತನು ಅಸ್ವಸ್ಥ ಚಿತ್ತನಾಗಿದ್ದಾನೆಯೇ ಮತ್ತು ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿಸಲಾಗಿದೆಯೇ? ಅಥವಾ ಆತನು ಕಿವುಡ ಅಥವಾ ಮೂಕನಾಗಿದ್ದಾನೆಯೇ? ಅಥವಾ ಕುಷ್ಠರೋಗ ಅಥವಾ ಯಾವುದೇ ಸಾಂಕ್ರಾಮಿಕ ಅಥವಾ ಗಂಭೀರ ಖಾಯಿಲೆಗಳಿಂದ ಬಳಲುತ್ತಿದ್ದಾನೆಯೇ? ಹಾಗಿದ್ದಲ್ಲಿ ವೈದ್ಯಕೀಯ ಅರ್ಹತಾ ಪ್ರಮಾಣ ಪತ್ರವನ್ನು ಸಲ್ಲಿಸುವುದು; :

9. ಆತನು ಯಾವುದೇ ಸಮಯದಲ್ಲಿ ಸಂಸ್ಥೆಯ ಹಿತಾಸಕ್ತಿಗೆ ವಿರುದ್ಧವಾಗಿ ವರ್ತಿಸಿದ್ದಾನೆಯೇ? :

10. ಆತನು ಅಂತಹ ಸಂಸ್ಥೆಯ (ಅರ್ಚಕತನವನ್ನು ಹೊರತುಪಡಿಸಿ) ಪದದಾರಕನಾಗಿದ್ದಾನೆಯೇ? ಅಥವಾ ಅದಕ್ಕೆ ಸಂಬಂಧಿಸಿದಂತೆ ನೌಕರನಾಗಿದ್ದಾನೆಯೇ? ಅಥವಾ ಅದರಿಂದ ಯಾವುದೇ ಸಂಸ್ಥೆಯಿಂದ ಯಾವುದೇ ವೇತನ ಅಥವಾ ಉಪಲಬ್ದಿಗಳು ಅಥವಾ ಸವಲತ್ತುಗಳನ್ನು ಸ್ವೀಕರಿಸುತ್ತಿದ್ದಾನೆಯೇ? :

11. ಅರ್ಜಿದಾರನು ಯಾವುದೇ ಇತರ ಅಧಿಸೂಚಿತ ಸಂಸ್ಥೆಗಳ ವ್ಯವಸ್ಥಾಪನಾ ಸಮಿತಿಯ ಸದಸ್ಯನಾಗಿದ್ದಾನೆಯೇ? ಹಾಗಿದ್ದಲ್ಲಿ ವಿವರಗಳನ್ನು ಒದಗಿಸುವುದು; :

12. ಧಾರ್ಮಿಕ ಕ್ಷೇತ್ರಕ್ಕೆ ಅರ್ಜಿದಾರನು ಸಲ್ಲಿಸಿದ ಸೇವೆಗಳು, ಯಾವುದಾದರೂ ಇದ್ದಲ್ಲಿ :

ಅರ್ಜಿದಾರರ ಸಹಿ

**ಘೋಷಣೆ**

. . .. . . . . .. . .. . . . . . . ರವರ ಮಗನಾದ. . . . . . . . . ಎಂಬ ನಾನು ಮೇಲೆ ಒದಗಿಸಿದ ಮಾಹಿತಿಯು ನನ್ನ ತಿಳುವಳಿಕೆಯ ಪ್ರಕಾರ ಸತ್ಯವಾಗಿದೆಯೆಂದು ಈ ಮೂಲಕ ಘೋಷಿಸುತ್ತೇನೆ ಮತ್ತು ಯಾವುದೇ ಮಾಹಿತಿಯು ಸತ್ಯವಲ್ಲವೆಂದು ಕಂಡು ಬಂದಲ್ಲಿ, ನನ್ನನ್ನು ವ್ಯವಸ್ಥಾಪನಾ ಸಮಿತಿಯ ಸದಸ್ಯತ್ವದಿಂದ ತೆಗೆದುಹಾಕಬಹುಗಿದೆ.

ದಿನಾಂಕ: ಅರ್ಜಿದಾರರ ಸಹಿ

**ನಮೂನೆ – I(ಸಿ)**
**(31ನೇ ಕಲಂ)**

**ಪ್ರತಿಯೊಂದು ಅಧಿಸೂಚಿತ ಸಂಸ್ಥೆಗಳ ಸಂಬಂಧದಲ್ಲಿ ದತ್ತಿ ಸರ್ವೆ ಅಧಿಕಾರಿಯು ಮಾಡಿದ ಸರ್ವೆಯ ವಿವರಗಳು**

| | | |
|---|---|---|
| 1. | ಸಂಸ್ಥೆಯ ಹೆಸರು | : |
| 2. | ಸಂಸ್ಥೆಯು ಇರುವ ಸ್ಥಳ<br>ಗ್ರಾಮ, ತಾಲ್ಲೂಕು, ಜಿಲ್ಲೆ | : |
| 3. | ಸ್ಥಿರ ಸ್ವತ್ತಿನ ವಿವರಗಳು | : |

| 1 | 2 | 3 | 4 | 5 | | 6 | 7 | 8 |
|---|---|---|---|---|---|---|---|---|
| ಸರ್ವೆ ನಂ./ಸಿಟಿಎಸ್ ನಂ./ ಮುನ್ನಿ ನಂ./ ಖಾತಾ ನಂ. | ಪ್ರದೇಶದ ಅಳತೆಯ ವ್ಯಾಪ್ತಿ | ಗ್ರಾಮ/ಪಟ್ಟಣ/ನಗರ | ಚಕ್ಕುಬಂದಿ:<br>ಪೂರ್ವಕ್ಕೆ<br>ಪಶ್ಚಿಮಕ್ಕೆ<br>ಉತ್ತರಕ್ಕೆ<br>ದಕ್ಷಿಣಕ್ಕೆ | ಸ್ವತ್ತಿನ ವಿವರ | | ಅರ್ಜನೆಯ ವಿಧಾನ | ಸ್ವತ್ತಿನ ಮೌಲ್ಯ | ಸರ್ವೆ ಅಧಿಕಾರಿಯು ಬಗೆಹರಿಸಿದ ವಿವಾದಗಳು ಯಾವುದಾದರೂ ಇದ್ದಲ್ಲಿ |
| | | | | ಖಾಲಿ | ಕಟ್ಟಡ | | | |

ಸರ್ವೆ ಮಾಡಿರುವ ಅಧಿಕಾರಿಯ
ಸಹಿ

ದತ್ತಿ ಸರ್ವೆ ಅಧಿಕಾರಿಯ
ಸಹಿ

**ನಮೂನೆ 1(ಡಿ)**
**(31ನೇ ಕಲಂ)**

ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ 31ನೇ ಪ್ರಕರಣದ (7)ನೇ ಉಪಪ್ರಕರಣದ ಅಡಿಯಲ್ಲಿ ಅಗತ್ಯಪಡಿಸಲಾದಂತೆ ಅಧಿಸೂಚಿತ ಸಂಸ್ಥೆಗಳ ಸಂಬಂಧದಲ್ಲಿ ಸ್ವತ್ತಿನ ವಿವರಗಳನ್ನು ಸಾರ್ವಜನಿಕರ ಮತ್ತು ಭಕ್ತಾಧಿಗಳ ಮಾಹಿತಿಗಾಗಿ ಈ ಮುಂದಿನಂತೆ ಪ್ರಕಟಿಸಲಾಗಿದೆ:

| 1 | 2 | 3 | 4 | 5 | |
|---|---|---|---|---|---|
| ಅಧಿಸೂಚಿತ ಸಂಸ್ಥೆಯ ಹೆಸರು ಮತ್ತು ಅದು ಇರುವ ಸ್ಥಳ ಗ್ರಾಮ/ತಾಲ್ಲೂಕು/ ಜಿಲ್ಲೆ | ಸರ್ವೆ ನಂ./ಸಿಟಿಎಸ್ ನಂ./ಮುನ್ನಿ ನಂ./ಖಾತಾ ನಂ. | ಪ್ರದೇಶ/ಅಳತೆ/ ವ್ಯಾಪ್ತಿ | ಚಕ್ಕುಬಂದಿ:<br>ಪೂರ್ವಕ್ಕೆ<br>ಪಶ್ಚಿಮಕ್ಕೆ<br>ಉತ್ತರಕ್ಕೆ<br>ದಕ್ಷಿಣಕ್ಕೆ | ಸ್ವತ್ತಿನ ವಿವರ | |
| | | | | ಖಾಲಿ | ಕಟ್ಟಡ |

ದತ್ತಿ ಸರ್ವೆ ಅಧಿಕಾರಿಯ ಸಹಿ

**ನಮೂನೆ II (ಎ)**

**(32ಎ ನಿಯಮ)**

**53ನೇ ಪ್ರಕರಣದ ಅಡಿಯಲ್ಲಿ ಉಪ ಆಯುಕ್ತನು ನೀಡಬೇಕಾದ ಪ್ರಮಾಣಪತ್ರ**

. . . . . . . . . . ದೇವಸ್ಥಾನದ ನ್ಯಾಸಧಾರಿ/ವ್ಯವಸ್ಥಾಪನೆಯ ಪ್ರಭಾರದಲ್ಲಿರುವ ವ್ಯಕ್ತಿಯಾದ ಶ್ರೀ/ಶ್ರೀಮತಿ. . . . . . . ರವರು . . . . . ರಂದು . . . . . ದೇವಸ್ಥಾನದ ನೋಂದಣಿಗಾಗಿ ಅರ್ಜಿಯನ್ನು ಸಲ್ಲಿಸಿದ್ದು ಮತ್ತು ಹಿತಾಸಕ್ತಿಯುಳ್ಳ ಎಲ್ಲಾ ಪಕ್ಷಕಾರರ ಅಹವಾಲನ್ನು ಕೇಳಿದ ತರುವಾಯ ಅರ್ಜಿಯಲ್ಲಿ ಒದಗಿಸಿದ ದೇವಸ್ಥಾನದ ವಿವರಗಳು ಯತಾರ್ಥವಾಗಿದೆಯೆಂದು ಪರಿಗಣಿಸಲಾಗಿದೆ ಮತ್ತು ಅದನ್ನು ಕಛೇರಿ ವಹಿಯ ಕ್ರಮ ಸಂಖ್ಯೆ . . . . . ರಲ್ಲಿ ದಿನಾಂಕ: . . . . . . ರಂದು ನೋಂದಾಯಿಸಲಾಗಿದೆ.

ಸಹಾಯಕ ಆಯುಕ್ತ ಮತ್ತು

ನೋಂದಣಿ ಪ್ರಾಧಿಕಾರಿ

**ನಮೂನೆ II (ಬಿ)**

**(33ಎ ನಿಯಮ)**

**ನೋಂದಣಿಗಾಗಿ ಸೂಚನೆ**

ಇವರಿಗೆ:

ಶ್ರೀ . . . . . . . . . .

ಶ್ರೀ . . . . . . . . . . ನ್ಯಾಸಧಾರಿಗಳು.

(ಪೂರ್ಣ ವಿಳಾಸ)

ಶ್ರೀ . . . . . . . . ವ್ಯವಸ್ಥಾಪನಾ ನ್ಯಾಸಧಾರಿ/ಪ್ರಭಾರದ ವ್ಯಕ್ತಿಯಾದ ನೀವು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ 53ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ಅಗತ್ಯಪಡಿಸಲಾದಂತೆ ಸದರಿ ಸಂಸ್ಥೆಯನ್ನು ನೋಂದಣಿಗಾಗಿ ಸಲ್ಲಿಸುವಲ್ಲಿ ವಿಫಲರಾಗಿರುವುದು ನನ್ನ ಗಮನಕ್ಕೆ ಬಂದಿರುವುದರಿಂದ;

ಪ್ರಸ್ತುತ ಅಧಿನಿಯಮದ 53ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ದೇವಸ್ಥಾನವನ್ನು ನೋಂದಾಯಿಸುವುದಕ್ಕಾಗಿ ಈ ಸೂಚನೆಯನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಅರ್ಜಿಯನ್ನು ಸಲ್ಲಿಸಲು ವಿಫಲನಾದಲ್ಲಿ ಸದರಿ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಶ್ರೀ . . . . . ದೇವಸ್ಥಾನವನ್ನು ನೋಂದಾಯಿಸುವುದಕ್ಕೆ ಒತ್ತಾಯಿಸಲ್ಪಟ್ಟಿದ್ದೇನೆ ಹಾಗೂ ಅದಕ್ಕೆ ಸಂಬಂಧಿಸಿದ ವೆಚ್ಚವನ್ನು ಸದರಿ ದೇವಸ್ಥಾನಕ್ಕೆ ವಿಧಿಸಲಾಗುವುದು.

ಸಹಾಯಕ ಆಯುಕ್ತ ಮತ್ತು

ನೋಂದಣಿ ಪ್ರಾಧಿಕಾರಿ

**ನಮೂನೆ II (ಸಿ)**

**(32ಎ ನಿಯಮ)**

**ಕಡ್ಡಾಯ ನೋಂದಣಿಗಾಗಿ ಉಪ ಆಯುಕ್ತರಿಂದ ಪ್ರಮಾಣಪತ್ರ**

ಶ್ರೀ . . . . . . . . ದೇವಸ್ಥಾನದ ನ್ಯಾಸಧಾರಿ/ ವ್ಯವಸ್ಥಾಪನೆಯ ಪ್ರಭಾರದಲ್ಲಿರುವ ವ್ಯಕ್ತಿಯಾದ ಶ್ರೀ/ಶ್ರೀಮತಿ . . . . . . . . ಇವರು ಅಧಿನಿಯಮದ 53ನೇ ಪ್ರಕರಣದ ಅಡಿಯಲ್ಲಿ ನೋಂದಾಯಿಸಲು ವಿಫಲರಾಗಿದ್ದು ಮತ್ತು ಸಂಬಂಧಪಟ್ಟವರಿಗೆ ಸೂಕ್ತ ಸೂಚನೆಗಳನ್ನು ನೀಡಿದ ತರುವಾಯ ಹಾಗೂ ಅಹವಾಲನ್ನು ಕೇಳಿದ ನಂತರ ಮತ್ತು ಸ್ಥಳ ಪರಿಶೀಲನೆಯ ತರುವಾಯ ಮೇಲೆ ಹೇಳಿದ ಸದರಿ ದೇವಸ್ಥಾನದ ಸಂಬಂಧದಲ್ಲಿ ಒಟ್ಟುಗೂಡಿಸಿದ ಮಾಹಿತಿಯು ಯತಾರ್ಥವಾಗಿದೆಯೆಂದು ಪರಿಗಣಿಸಲಾಗಿದೆ ಮತ್ತು ತದನುಸಾರವಾಗಿ ಈ ಕಚೇರಿಯಲ್ಲಿ ನೋಂದಣಾ ವಹಿಯ ಕ್ರಮಸಂಖ್ಯೆ . . . . . ರಲ್ಲಿ ದಿನಾಂಕ: . . . . . ರಂದು ಅದನ್ನು ನೋಂದಾಯಿಸಲಾಗಿದೆ.

ಸದರಿ ದೇವಸ್ಥಾನದ ನೋಂದಾಣಿಗಾಗಿ ಆದ ವೆಚ್ಚವನ್ನು . . . . ಎಂದು ಲೆಕ್ಕ ಹಾಕಲಾಗಿದ್ದು ಅದನ್ನು ಶ್ರೀ . . . . . ದೇವಸ್ಥಾನದ ನಿಧಿಯಿಂದ ದಿನಾಂಕ: .. .. . . ರಂದು ಅಥವಾ ಅದಕ್ಕೆ ಮೊದಲು ಈ ಕಚೇರಿಯಲ್ಲಿ ಸಂದಾಯ ಮಾಡತಕ್ಕದ್ದೆಂದು ಆದೇಶಿಸಲಾಗಿದೆ.

ಉಪ ಆಯುಕ್ತ ಮತ್ತು

ನೋಂದಣಿ ಪ್ರಾಧಿಕಾರಿ

**REVENUE SECRETARIAT**

**NOTIFICATION**

**No. RD 148 Musevi 2011, Bangalore, dated: 04.01.2012**

The draft of the following rules further to amend the Karnataka Hindu Religious Institutions and Charitable Endowments Rules, 2002, which the Government of Karnataka proposes to make in exercise of the powers conferred by section 76 of the Karnataka Hindu Religious Institutions and Charitable Endowments Act, 1997, (Karnataka Act 33 of 2001) is hereby published as required by sub-section (1) of section 76 of the said Act, for the information of all persons likely to be affected thereby and notice is hereby given that the said draft will be taken into consideration after expiry of fifteen days from the date of its publication in the Official Gazette.

Any objections and suggestions which may be received by the State Government from any person with respect to the said draft before the expiry of the period specified above will be considered by the State Government. Objections or suggestions may be addressed to the Secretary to Government, Revenue Department, Multi-storeyed Building, Bangalore – 560 001.

**DRAFT RULES**

**1. Title and commencement:**- (1) These rules may be called the Karnataka Hindu Religious Institutions and Charitable Endowments (Amendment) Rules, 2012.

**(2)** They shall come into force from the date of their publication in the official Gazette.

**2. Amendment of rule 3:-** In the Karnataka Hindu Religious Institutions and Charitable Endowments Rules, 2002 (hereinafter referred to as the said rules) in rule 3 of the said rules:-

(a) in sub-rule (1)

(1) in clause (a), for the words 'rupees ten lakhs', the words 'rupees twenty five lakhs' shall be substituted;

(2) in clause (b) for the words 'rupees one lakh but does not exceed rupees ten lakhs', the words 'rupees five lakhs but does not exceed rupees twenty five lakhs' shall be substituted;

(3) in clause (c) for the words 'rupees one lakh' the words 'rupees five lakhs' shall be substituted;

(b) in sub-rule (2) for the words "the Commissioner" the words 'subject to the provisions of the Act, the Commissioners' shall be substituted.

**3. Amendment of rule 6:-** In rule 6 of the said rules:-

(1) in sub-rule (1), for the words 'twenty one years' the words "eighteen years" shall be substituted;

(2) after sub-rule (1), the following proviso shall be inserted, namely:-

"Provided that if no eligible candidate is available for any particular category of post the Commissioner may relax upper age limit in favour of any person for being appointed as indoor temple servant;

**4. Amendment of rule 8 :** For rule 8 of the said rules, the following shall be substituted, namely:-

**"8. Emoluments of Archaks and Temple Servants**:- (1) For the purpose of salary and emoluments of the Archaks and temple servants, classifications of the notified institutions under sub-rule (1) of rule 3 shall mutatis mutandis is applicable.

(2) (i) The salary and emoluments of the full time Archaks and temple servants working in the notified institutions may be fixed in the following rates; namely:-

| Designation of the post | Scale of pay | | |
|---|---|---|---|
| | Institutions | | |
| | Category I | Category II | Expansion of pay scale |
| **1.** Parupatthedara/ Peshkar/ Manager/ Bill Collector/ Receptionist/ Shanbhog/ Clerk Typist, etc., | 6050-13000 | 5500-12200 | 6050-150-6650-175-7350-200-8350-250-9600-300-10800-350-12200-400-13000 |
| **2.** Pradhan Archak | | | The emoluments may be determined by the Management Committee of the Notified Institution/ declared institution subject to the approval of the prescribed authority considering the tatte kasu and seva resume (commission) received by the Archaks. |
| **3.** Archak | | | |
| **4.** Asst. Archak | | | |
| **5.** Drivers/ Electricians/ Plumber | 5500-12200 | | 5500-125-5750-150-6650-175-7350-200-8350-250-9600-300-10800-350-12200 |
| **6.** Full time Agamic/ Tantri | 5500-12200 | 5000-10200 | |
| **7.** Upadhivantha/ Tantri/ Mantra Pushpa/ Veda parayana/ Prabandha Jyothishya Havana | 4050-8850 | 3600-7750 | 5000-125-5750-150-6650-175-7350-200-8350-250-9600-300-10200 |
| **8.** Upadhivantha (non vaidic) Paricharaka, Pachaka, Sthanika, Sripada, Joisa, Srigandha, Kattige, Sevakare | 4050-8850 | 3600-7750 | 4050-75-4200-100-5000-125-5750-150-6650-175-7350-200-8350-250-8850 |
| **9.** Attendant/ Watchman/ Peon/ Roomboy | 4050-8850 | 3600-7750 | 3600-75-4200-100-5000-125-5750-150-6650-175-7350-200-7750 |
| **10.** Sweeper/ Scavenger/ Gardner/ Dobhi/ Deevatige/ Bhajantri | 3600-7750 | 3000-6050 | 3000-50-3600-75-4200-100-5000-125-5750-150-6050 |

(ii) The pay of full time temple servants who are drawing consolidated salary shall be fixed in the respective pay scales after the commencement of the Karnataka Hindu Religious Institutions and Charitable Endowments (Amendment) Rules, 2012.

Provided, while sanctioning the above pay scales the proviso under Sub Section (2) of Section 36 shall be kept in mind that, the salaries of Archaks and temple servants shall not exceed 35% of the gross income of the institution.

Provided further that the Archaks and temple servants may continue to draw the salary and emoluments they were drawing as on the date of commencement of these rules, if it is advantageous to them.

Provided further that the emoluments of the part time workers may be given according their work load and the hours of work.

3. The pay and emoluments of the Archaks and temple servants of Category-C institution may be paid in lump sum depending on the income of the temple. The pay and emoluments may be increased upto 10% of the existing emoluments once in three years, subject to the condition that the salaries of the Archaks and temple servants shall not exceed 35% of gross income of the institution.

4. The Committee of management as far as possible provide rent free accommodation to Archaks within the temple premises or near by the temple".

**5. Amendment of rule 10:-** In rule 10 of the said rules:-

(1) for sub-rule (2), following shall be substituted, namely:-

"(2) The Government may examine the proposal in accordance with the provisions of the Act and accord approval of the pattern of temple servants as proposed by the Committee of Management subject to the recommendation of the Commissioner according to the necessity and the income of the each institution.

(2) for sub Rule (3), the following shall be substituted, namely:

"(3) The recruitment of non hereditary Archaks and temple servants shall take place in accordance with the cadre and recruitment rules framed by the Government for each category of the post."

(3) after sub-rule (3), the following shall be inserted, namely:-

"(4) All the non hereditary Archaks including temple servants are liable to be transferred from one institution to another of the same category, subject to the protection of pay and emoluments."

**6. Amendment of rule 11:-** In rule 11 of the said rules,

(a) in sub rule (1) for the words 'twenty one' the words 'eighteen' and for the words 'thirty three' the words 'thirty five' shall be substituted;

(b) In sub-rule (2), for the words "sixty years' the words "sixty five years" shall be substituted.

**7. Amendment of rule 12:-** In rule 12 of the said rules:-

(1) in sub-rule (1), for words "Archaka and temple servant" the words 'non hereditary Archaka including temple servant' shall be substituted.

(2) after sub-rule (1), the following proviso shall be inserted, namely:-
"Provided that subject to section 58, the reservation policy of the Government has to be followed in the recruitment of non hereditary Archaks and non hereditary temple servants".

**8. Amendment of rule 16:** In rule 16 of the said rules,

(a) for sub rule (1), (2) and (3) the following shall be substituted namely:-

"(1) Fifteen days salary for every completed year of service, subject to a maximum of rupees fifty thousand where there is no provident fund or insurance fund benefit or both are extended by the notified institution and subject to a maximum of rupees thirty five thousand where provident fund and insurance fund benefits are extended by the notified institution.

**Note:** For the purposes of this sub-rule Salary means only pay excluding allowance.

(2) The minimum service for the retirement benefit under these rules shall be ten years.

(3) In case of death of archaks and temple servants after completion of three years but before the completion of ten years, rupees thirty thousand or the amount calculated as at sub-rule (1) whichever is more shall be paid as terminal benefit.

Provided that sufficient fund at the credit of the institution, are not available, the terminal benefits shall be paid from common pool fund. However, the terminal benefit paid out of the common pool fund shall not exceed rupees fifteen percent of the fund collected during the year. "

**9. Amendment of rule 17**: In rule 17 of the said rule, in sub-rule (1) after the words "neglect of duties", the words, figures and letters "for any disqualification specified in Section 10 A" shall be inserted.

**10. Amendment of rule 19**: In rule 19 of the said rules:-

(1) for sub-rule (3), the following shall be substituted, namely:-

"(3) The Commissioner shall keeping in view the funds available for allotment, pool up the proposals sent by the Deputy Commissioners, place the same before the Rajya Dharmika Parishat. The Rajya Dharmika Parishat shall consider the proposal and sanction the amount district-wise as far as possible, in an equal manner. The amount sanctioned shall be released to the Deputy Commissioner along with a sanction order, with a copy to the institution concerned. The concerned institution shall send an utilisation certificate to the Commissioner, through the Deputy Commissioner within a period of one year for having utilised the allotted amount."

(2) In sub-rule (4), (5) and (6), for the words 'Assistant Commissioner' wherever it appears the words 'Deputy Commissioner' shall be substituted.

**11. Insertion of new rule 19 A:** After Rule 19 of the said rules, the following shall be inserted, namely:-

**19.A: Sanction of aid to temple art and architecture and sculpture:-** Sanction of aid from Common Pool Fund not exceeding ten percent of the fund received during the year, for the temple art, architecture and sculpture may be paid to the Karnataka Shilpa Kala Academy yearly, to promote state architecture training centre of construction of temple gopura, sthapathi work with sculpture subject to the conditions that may be specified by the Government from time to time."

**12. Amendment of rule 20**: In rule 20 of the said rules:-

(1) for the words, brackets and figure "under Sub Section (3) of Section 19", the words and letter "under section 21 F" shall be substituted;

(2) in sub-rule (1), for the words 'shall not exceed rupees five thousand' the words 'shall not exceed rupees two lakhs' shall be substituted;

(3) in sub-rule (9) for the words 'till after the Advisory Committee', the words 'till the Rajya Dharmika Parishat' shall be substituted.

**13. Amendment of rule 21**: For the rule 21 of the said rules, the following shall be substituted, namely:-

**"21**: **Meeting of Rajya Dharmika Parishat**:- (1) The Rajya Dharmika Parishat shall meet at least once in two months. Any special meeting maybe convened by the Secretary, at any time, on the direction or with the approval of Chairman for discussing any urgent matter and the meeting may be held at Bangalore or any convenient place as suggested by the Chairman.

(2) The Rajya Dharmika Parishat shall consider and decide all the disputes and matters as specified under Section 20 A.

(3) The quorum for the meeting shall be one third of the total members of Rajya Dharmika Parishat in office.

(4) The non-official member of Rajya Dharmika Parishat shall be entitled to:-

(i) travelling allowance at the rate of actual train fare not exceeding 2A.C. or bus fare or if he travels in any other vehicle, rupees seven per km with a minimum of rupees thirtyfive.

(ii) sitting fee of rupees five hundred for each day of the sitting of the Rajya Dharmika Parishat;

(5) The agenda for the meeting shall be prepared by the Secretary with the approval of the Chairman and sent to the members at least seven days in advance along with the notice.

Provided that, where the meeting is convened at a short notice, the agenda may be placed at the meeting.

(6) The Rajya Dharmika Parishat shall as far as possible endeavour to arrive at unanimous decision and where there is no unanimity, the issue shall be put to vote by raising hands. In case of tie, the Chairman will cast a second vote.

(7) The members present in the meeting shall sign the minute book, the Secretary shall record minutes of the meeting and cause to obtain approval of the Chairman of the Rajya Dharmika Parishat.

(8) The decision of the meeting may be communicated by the Secretary of the Rajya Dharmika Parishat in the form of an official order to all the concerned with the number and date of resolution of the meeting of the Rajya Dharmika Parishat.

(9) The hearing of the appeals or any dispute by the Nyayadhikarana shall be held in the office of the Commissioner, consisting of a Judicial member and the Commissioner. The Judicial member shall be entitled to a sitting fee of rupees five hundred for every sitting.

(10) In dissolving the Committee of Management of notified institution under Section 28, the framing of charges, issue of show-cause notice and the enquiry required to be held in respect of any charge, shall be done by the Secretary of the Rajya Dharmika Parishat and the enquiry report may be placed before the Rajya Dharmika Parishat, for a decision in the matter. After the decision, the same be communicated by the Secretary in the form of an office order.

**21 A. Meeting of the Zilla Dharmika Parishat**:-(1) The Zilla Dharmika Parishat shall meet at least once in two months. Any special meeting may be convened at any time on the direction of the Chairman for discussing urgent matter.

(2) The Zilla Dharmika Parishat may consider and decide all the matter and disputes as enumerated under Section 21 'A'.

(3) The meeting of Zilla Dharmika Parishat may be convened by the Secretary of Zilla Dharmika Parishat with the consent of the Chairman and the meeting may be held in the District Head quarters or any convenient place within the district, as suggested by the Chairman.

(4) The quorum for the meeting shall be one third of the total members of the Zilla Dharmika Parishat in office.

(5) The non-official member of Zilla Dharmika Parishat shall be entitled to:-

ಅಂಥ ಅರ್ಜಿಗಳನ್ನು ಪರಿಗಣಿಸತಕ್ಕದ್ದು ಹಾಗೂ ಅರ್ಜಿಯನ್ನು ಸ್ವೀಕರಿಸಿದ ದಿನಾಂಕದಿಂದ ಮೂರು ತಿಂಗಳುಗಳ ಅವಧಿಯೊಳಗೆ ಪ್ರತಿಯೊಬ್ಬ ಅರ್ಜಿದಾರನಿಗೆ ನೀಡಬೇಕಾದ ಪರಿಹಾರದ ಮೊತ್ತವನ್ನು ನಿಯಮಿಸಬಹುದಾದ ನಿಯಮಗಳಿಗನುಸಾರವಾಗಿ ನಿರ್ಧರಿಸತಕ್ಕದ್ದು:

ಪರಂತು ಸಮಿತಿಯು, ದೂರು ಅಥವಾ ಅರ್ಜಿಯನ್ನು ಯುಕ್ತ ಸಮಯದಲ್ಲಿ ಸಲ್ಲಿಸದಿರುವುದಕ್ಕೆ ಸೂಕ್ತ ಕಾರಣವನ್ನು ಫಿರ್ಯಾದುದಾರ ಅಥವಾ ಅರ್ಜಿದಾರನು ಹೊಂದಿದ್ದನೆಂಬುದನ್ನು ಮನಗಂಡಲ್ಲಿ, ಮೂರು ತಿಂಗಳು ಮೀರಿದ ತರುವಾಯವೂ ಅಂಥ ದೂರುಗಳು ಅಥವಾ ಅರ್ಜಿಗಳನ್ನು ಪುರಸ್ಕರಿಸಬಹುದು.

(5) ಅಲ್ಲದೆ ಸಮಿತಿಯು, (4)ನೇ ಉಪಪ್ರಕರಣದಡಿಯಲ್ಲಿ ನಿರ್ಧರಿಸಲಾದಂಥ ಮೊತ್ತವನ್ನು, ತಾನು ಸಂದಾಯ ಮಾಡಿದ ಮೊತ್ತಕ್ಕೆ ಹೆಚ್ಚುವರಿಯಾಗಿ, ಬಾಧಿತ ವ್ಯಕ್ತಿಗೆ ಆದೇಶದ ದಿನಾಂಕದಿಂದ ಎರಡು ತಿಂಗಳೊಳಗೆ ಸಂದಾಯ ಮಾಡುವಂತೆ ಲೈಸನ್ಸುದಾರನಿಗೆ ನಿರ್ದೇಶನ ನೀಡಬಹುದು, ಇದಕ್ಕೆ ತಪ್ಪಿದಲ್ಲಿ ಲೈಸನ್ಸ್‌ನ್ನು ರದ್ದುಪಡಿಸತಕ್ಕದ್ದು.

**13. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ಬಾಧಿತರಿಗಾಗಿ ಪರಿಹಾರ ನಿಧಿಯ ಎಲ್ಲಾ ಸ್ವೀಕೃತಿಗಳು ಮತ್ತು ವೆಚ್ಚಗಳ ಲೆಕ್ಕಪತ್ರಗಳನ್ನು ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಮತ್ತು ಅಂಥ ನಮೂನೆಯಲ್ಲಿ ಇಡತಕ್ಕದ್ದು.

(2) ಬಾಧಿತರಿಗಾಗಿ ಪರಿಹಾರ ನಿಧಿಯ ಲೆಕ್ಕಪತ್ರಗಳು ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ವಾರ್ಷಿಕ ಲೆಕ್ಕಪರಿಶೋಧನೆಗೆ ಒಳಪಟ್ಟಿರತಕ್ಕದ್ದು ಮತ್ತು ವಾರ್ಷಿಕವಾಗಿ ಲೆಕ್ಕಪರಿಶೋಧನಾ ವರದಿಯನ್ನು ರಾಜ್ಯಸರ್ಕಾರಕ್ಕೆ ಕಳುಹಿಸತಕ್ಕದ್ದು.

**14. ವಾರ್ಷಿಕ ವರದಿ.–** ಸಮಿತಿಯು, ಈ ಅಧಿನಿಯಮದ ಅಡಿಯಲ್ಲಿ ತನ್ನ ಚಟುವಟಿಕೆಗಳ ವರದಿಯನ್ನು ಪ್ರತಿವರ್ಷಕ್ಕಾಗಿ ತಯಾರಿಸತಕ್ಕದ್ದು ಮತ್ತು ಅದನ್ನು ನಿಯಮಿಸಬಹುದಾದ ಅಂಥ ನಮೂನೆಯಲ್ಲಿ ಅಂಥ ದಿನಾಂಕದಂದು ಅಥವಾ ಅದಕ್ಕೆ ಮುಂಚೆ ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು ಮತ್ತು ರಾಜ್ಯ ಸರ್ಕಾರವು ಅದನ್ನು ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಮಂಡಿಸುವಂತೆ ಮಾಡತಕ್ಕದ್ದು.

**15. ಲೈಸೆನ್ಸಿಂಗ್ ಪ್ರಾಧಿಕಾರದ ಆದೇಶಗಳ ವಿರುದ್ಧ ಅಪೀಲುಗಳು.–** (1) ಸಂಬಂಧಪಟ್ಟ ಪ್ರದೇಶದ ಪ್ರಾದೇಶಿಕ ಕಮೀಷನರನು, ತನಗೆ ಸಂಬಂಧಿಸಿದ ಅಧಿಕಾರ ವ್ಯಾಪ್ತಿಯೊಳಗೆ ಲೈಸೆನ್ಸಿಂಗ್ ಪ್ರಾಧಿಕಾರವು ಹೊರಡಿಸಿದ ಆದೇಶಗಳ ಅಪೀಲುಗಳ ಸಂಬಂಧದಲ್ಲಿ, ಅಪೀಲು ಪ್ರಾಧಿಕಾರಿಯಾಗಿರತಕ್ಕದ್ದು.

(2) ಬಾಧಿತ ವ್ಯಕ್ತಿಗೆ ಕಳುಹಿಸಿದ ಅಪೀಲಿನ ವಿರುದ್ಧದ ಆದೇಶದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಪ್ರತಿಯೊಂದು ಅಪೀಲನ್ನು ಸಲ್ಲಿಸತಕ್ಕದ್ದು:

ಪರಂತು, ಅಪೀಲನ್ನು ಆ ಅವಧಿಯಲ್ಲಿ ಹಾಜರುಪಡಿಸದಿರಲು ಅಪೀಲುದಾರನು ಸಾಕಷ್ಟು ಕಾರಣವನ್ನು ತೋರಿಸಿದಲ್ಲಿ, ಅಪೀಲನ್ನು ಸದರಿ ಮೂವತ್ತು ದಿನಗಳ ಅವಧಿಯ ತರುವಾಯವೂ ಒಪ್ಪಿಕೊಳ್ಳಬಹುದು.

(3) ಪ್ರತಿಯೊಂದು ಅಪೀಲು, ಆದೇಶಕ್ಕೆ ಆಕ್ಷೇಪಣೆಯ ಆಧಾರಗಳನ್ನು ಸಂಕ್ಷಿಪ್ತವಾಗಿ ಹೇಳುವ ಜ್ಞಾಪನಾಪತ್ರದ ನಮೂನೆಯಲ್ಲಿ ಇರತಕ್ಕದ್ದು ಮತ್ತು ಅದರೊಂದಿಗೆ ಯಾವ ಆದೇಶದ ವಿರುದ್ಧ ಅಪೀಲನ್ನು ಸಲ್ಲಿಸಲಾಗಿದೆಯೋ ಆ ಆದೇಶದ ಪ್ರತಿಯು ಇರತಕ್ಕದ್ದು.

(4) ಅಪೀಲನ್ನು, ಎರಡೂ ಕಡೆಯ ಅಹವಾಲನ್ನು ಕೇಳಿದ ಮೇಲೆ ಮೂರು ತಿಂಗಳುಗಳ ಅವಧಿಯೊಳಗೆ ವಿಲೆ ಮಾಡತಕ್ಕದ್ದು.

**16. ದಂಡಗಳು.–** (1) ಲೈಸೆನ್ಸಿನ ಷರತ್ತುಗಳನ್ನು ಉಲ್ಲಂಘಿಸುವ ಯಾವೊಬ್ಬ ವ್ಯಕ್ತಿಯು, ಎರಡು ವರ್ಷಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಇಪ್ಪತ್ತೈದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

(2) ಈ ಅಧಿನಿಯಮದ ಯಾವುದೇ ಉಪಬಂಧದ ಅಡಿಯಲ್ಲಿ ಮಾಡಲಾದ ಯಾವುದೇ ನಿಯಮವು, ಅದರ ಯಾವುದೇ ಉಲ್ಲಂಘನೆಗಾಗಿ ಒಂದು ವರ್ಷದವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ, ಅಥವಾ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ಮತ್ತು ಆ ಉಲ್ಲಂಘನೆಯು ಮುಂದುವರೆಯುತ್ತಿರುವ ಸಂದರ್ಭದಲ್ಲಿ, ಮೊದಲನೆಯ ಅಂಥ ಉಲ್ಲಂಘನೆಗಾಗಿ, ಅಪರಾಧ ನಿರ್ಣಯವಾದ ತರುವಾಯ, ಅಂಥ ಉಲ್ಲಂಘನೆಯು ಮುಂದುವರೆದ ಪ್ರತಿಯೊಂದು ದಿನಕ್ಕೆ ಐದುನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಹೆಚ್ಚಿನ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದೆಂದು ಉಪಬಂಧಿಸಬಹುದು.

**17. ಅಪರಾಧಗಳ ಸಂಜ್ಞೇಯತೆ.–** (1) ಲೈಸೆನ್ಸಿಂಗ್ ಪ್ರಾಧಿಕಾರವು, ಈ ಬಗ್ಗೆ ಅಧಿಕೃತಗೊಳಿಸಿದ ವ್ಯಕ್ತಿಯು ಲಿಖಿತದಲ್ಲಿ ಮಾಡಿಕೊಂಡ ದೂರಿನ ಮೇಲಲ್ಲದೆ ಯಾವುದೇ ನ್ಯಾಯಾಲಯವು ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಲಾದ ಯಾವುದೇ ನಿಯಮದ ಅಡಿಯಲ್ಲಿ ದಂಡನೀಯವಾದ ಯಾವುದೇ ಅಪರಾಧದ ಸಂಜ್ಞೇಯತೆಯನ್ನು ತೆಗೆದುಕೊಳ್ಳತಕ್ಕದ್ದಲ್ಲ.

(2) ಮೊದಲನೇ ದರ್ಜೆ ನ್ಯಾಯಿಕ ದಂಡನಾಧಿಕಾರಿ ನ್ಯಾಯಾಲಯವನ್ನು ಹೊರತುಪಡಿಸಿ ಇತರ ಯಾವುದೇ ನ್ಯಾಯಾಲಯವು, ಈ ಅಧಿನಿಯಮದ ಅಡಿಯಲ್ಲಿ ದಂಡನೀಯವಾದ ಯಾವುದೇ ಅಪರಾಧದ ವಿಚಾರಣೆ ಮಾಡತಕ್ಕದ್ದಲ್ಲ.

**18. ನಿಯಮಗಳ ರಚನಾಧಿಕಾರ.-** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸಲು, ಪೂರ್ವ ಪ್ರಕಟಣೆಯ ತರುವಾಯ, ಅಧಿಸೂಚನೆಯ ಮೂಲಕ, ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಸಾಧ್ಯವಾದಷ್ಟು ಬೇಗನೇ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಒಂದು ಅಧಿವೇಶನ ಅಥವಾ ಎರಡು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳವರೆಗೆ ಅಧಿವೇಶನದಲ್ಲಿರುವಾಗ, ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ನಿಕಟೋತ್ತರ ಅಧಿವೇಶನಗಳು ಮುಕ್ತಾಯವಾಗುವ ಮೊದಲು, ವಿಧಾನಮಂಡಲದ ಉಭಯಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಟು ಮಾಡಬೇಕೆಂದು ಒಪ್ಪಿದರೆ ಅಥವಾ ನಿಯಮವನ್ನು ರಚಿಸಬಾರದೆಂದು ಉಭಯ ಸದನಗಳು ಒಪ್ಪಿದರೆ, ಆ ತರುವಾಯ ಅಂಥ ನಿಯಮವು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಅಂಥ ಮಾರ್ಪಾಟು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಈ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವಾಗತಕ್ಕದ್ದಲ್ಲ.

**19. ತೊಂದರೆಗಳ ನಿವಾರಣೆ.–** ಈ ಅಧಿನಿಯಮದ ಉಪಬಂಧವನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆಯು ಉದ್ಭವಿಸಿದರೆ, ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ, ಸಂದರ್ಭವು ಅಗತ್ಯಪಡಿಸಬಹುದಾದಂತೆ ತೊಂದರೆಯನ್ನು ನಿವಾರಿಸಲು ಅವಶ್ಯವೆಂದು ಕಂಡುಬರುವ ಯಾವುದೇ ಕಾರ್ಯವನ್ನು ಮಾಡಬಹುದು.

**20. ನಿರಸನ ಮತ್ತು ಉಳಿಸುವಿಕೆಗಳು.–** (1) ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ನಿಯಂತ್ರಣ ಅಧ್ಯಾದೇಶ, 2011ನ್ನು (2011ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 2) ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸನಗೊಳಿಸಿದ್ದಾಗ್ಯೂ, ಸದರಿ ಅಧ್ಯಾದೇಶದ ಮೂಲಕ ಮಾಡಲಾದ ಯಾವುದೇ ಕಾರ್ಯ ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ಅಧಿನಿಯಮದ ಅಡಿಯಲ್ಲಿ ಮಾಡಲಾಗಿದೆ ಅಥವಾ ಕೈಗೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ.ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – II | ಬೆಂಗಳೂರು, ಶುಕ್ರವಾರ, ಜನವರಿ ೬, ೨೦೧೨ (ಪುಷ್ಯ ೧೬, ಶಕ ವರ್ಷ ೧೯೩೩) | ನಂ. ೧೬ |
|---|---|---|

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 02 ಸೇಲೋಸೇ 2012, ಬೆಂಗಳೂರು, ದಿನಾಂಕ: 04–01–.2012**

ಕರ್ನಾಟಕ ಲೋಕಸೇವಾ ಆಯೋಗದಲ್ಲಿ ಸದಸ್ಯರಾಗಿ ಸೇವೆ ಸಲ್ಲಿಸುತ್ತಿರುವ ಶ್ರೀ ರುದ್ರೇಗೌಡ ಎಸ್. ಇವರ ಪದಾವಧಿಯು ಸಂವಿಧಾನದ ಅನುಚ್ಛೇದ 316(2) ರನ್ವಯ ದಿನಾಂಕ: 08.01.2012 ರಂದು ಅಪರಾಹ್ನ ಮುಗಿಯಲಿದೆ. ವಿವರಗಳು ಕೆಳಕಂಡಂತಿವೆ:

| ಕ್ರ ಸಂ | ಹೆಸರು | ಜನ್ಮ ದಿನಾಂಕ | ಅಧಿಕಾರ ವಹಿಸಿಕೊಂಡ ದಿನಾಂಕ | ನಿವೃತ್ತರಾಗಲಿರುವ ದಿನಾಂಕ |
|---|---|---|---|---|
| 1 | ಶ್ರೀ ರುದ್ರೇಗೌಡ, ಎಸ್. | 09.01.1950 | 03.11.2006 | 08.01.2012 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವಾ ನಿಯಮಗಳು–1)

# ವಿಶೇಷ ಪತ್ರಿಕೆ

| ಭಾಗ - V | ಬೆಂಗಳೂರು, ಸೋಮವಾರ, ಜನವರಿ ೯, ೨೦೧೨ (ಪುಷ್ಯ ೧೯, ಶಕ ವರ್ಷ ೧೯೩೩) | ನಂ. ೧೨ |
|---|---|---|


## ಒಳಾಡಳಿತ ಸಚಿವಾಲಯ

### ಪೊಲೀಸ್ ಇಲಾಖೆ

### India Reserve Battalion Constable (Men) -2012

**(ISO: 9001-2008 ಪ್ರಮಾಣಿತ ನೇಮಕಾತಿ ಪ್ರಕ್ರಿಯೆ)**

**ಅಧಿಸೂಚನೆ ಸಂಖ್ಯೆ. 10/ನೇಮಕಾತಿ–4/ಡಿಐಜಿಪಿ/2011–12, ದಿನಾಂಕ: 09.01.2012**

ವಿಷಯ: ಇಂಡಿಯಾ ರಿಸರ್ವ್ ಬೆಟಾಲಿಯನ್ ಕಾನ್ಸ್‌ಟೇಬಲ್ (ಪುರುಷ)–2012 ಹುದ್ದೆಗಳಿಗೆ ನೇಮಕಾತಿ ಕುರಿತು.

~ ~ ~ ~

ಕರ್ನಾಟಕ ರಾಜ್ಯದ, ಪೊಲೀಸ್ ಇಲಾಖೆಯಲ್ಲಿ ಇಂಡಿಯಾ ರಿಸರ್ವ್ ಬೆಟಾಲಿಯನ್ ಕಾನ್ಸ್‌ಟೇಬಲ್ ಹುದ್ದೆಗಳಿಗೆ ನೇಮಕಾತಿಗಾಗಿ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು, 2009 ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿ 1977 ಹಾಗೂ ಮೇಲೆ ತಿಳಿಯಪಡಿಸಿದ ನಿಯಮಗಳಿಗೆ ಕಾಲಕಾಲಕ್ಕೆ ಆಗುವ ತಿದ್ದುಪಡಿಗಳ ಅನುಸಾರ ಅರ್ಹ ಪುರುಷ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ಗಮನಿಸಿ : ಏಕಕಾಲದಲ್ಲಿ ವಿಶೇಷ ರಿಸರ್ವ್ ಪೊಲೀಸ್ ಕಾನ್ಸ್‌ಟೇಬಲ್ (ಪುರುಷ) ಕೆ.ಎಸ್.ಆರ್.ಪಿ. / ಇಂಡಿಯಾ ರಿಸರ್ವ್ ಬೆಟಾಲಿಯನ್ ಕಾನ್ಸ್‌ಟೇಬಲ್ (ಪುರುಷ)/ ವಿಶೇಷ ರಿಸರ್ವ್ ಸಬ್–ಇನ್ಸ್‌ಪೆಕ್ಟರ್ (ಪುರುಷ) ಕೆ.ಎಸ್.ಆರ್.ಪಿ. / ಐಆರ್‌ಬಿ ಸಬ್–ಇನ್ಸ್‌ಪೆಕ್ಟರ್ (ಪುರುಷ) ನಲ್ಲಿ ಖಾಲಿಯಿರುವ ಹುದ್ದೆಗಳ ನೇಮಕಾತಿಗಾಗಿ ಅರ್ಜಿಗಳನ್ನು ಆಹ್ವಾನಿಸಲಾಗಿರುತ್ತದೆ. ಅರ್ಹ ಅಭ್ಯರ್ಥಿಗಳು ಮೇಲಿನ ಎಲ್ಲಾ ಹುದ್ದೆಗಳಿಗೂ ಪ್ರಕಟಿಸಲಾಗುವ ಪ್ರತ್ಯೇಕ ಅಧಿಸೂಚನೆಯಲ್ಲಿರುವ ಷರತ್ತುಗಳನ್ವಯ ಪ್ರತ್ಯೇಕವಾಗಿ ಪರೀಕ್ಷಾ ಶುಲ್ಕ ಪಾವತಿಸಿ ಪ್ರತ್ಯೇಕ ಅರ್ಜಿಯನ್ನು ಸಲ್ಲಿಸಬಹುದಾಗಿರುತ್ತದೆ.**

**ವಿಶೇಷ ಸೂಚನೆ : ಈ ಮೇಲೆ ನಮೂದಿಸಿರುವ ಹುದ್ದೆಗಳಿಗೆ ನಿಯಮಿಸಲಾದ ಶಾರೀರಿಕ ಗುಣಮಟ್ಟಗಳು ಒಂದೇ ಆಗಿರುವುದರಿಂದ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯನ್ನು ಎಲ್ಲಾ ಹುದ್ದೆಗಳಿಗೂ ಒಂದು ಬಾರಿ ಮಾತ್ರ ನಡೆಸಲಾಗುವುದು. ಸದರಿ ಪರೀಕ್ಷೆಯಲ್ಲಿ ಉತ್ತೀರ್ಣರಾದ ಅಭ್ಯರ್ಥಿಗಳು ಅರ್ಜಿ ಸಲ್ಲಿಸಿದ ಎಲ್ಲಾ ಹುದ್ದೆಯ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅರ್ಹಗೊಳ್ಳುತ್ತಾರೆ. ಅನುತ್ತೀರ್ಣಗೊಂಡ ಅಭ್ಯರ್ಥಿಗಳು ಎಲ್ಲಾ ಹುದ್ದೆಗಳಿಗೂ ಅನರ್ಹಗೊಳ್ಳುತ್ತಾರೆ. ಆದ್ದರಿಂದ ಈ ದಿಸೆಯಲ್ಲಿ ಅಭ್ಯರ್ಥಿಗಳು ಕನಿಷ್ಠ ಒಂದು ತಿಂಗಳ ಮುಂಚೆಯಿಂದಲೇ ಸಹಿಷ್ಣುತೆ ಪರೀಕ್ಷೆಗೆ ಸಾಕಷ್ಟು ಅಭ್ಯಾಸ ಮಾಡಿಕೊಂಡು ಹಾಜರಾಗಲು ತಿಳಿಸಿದೆ. ಅನರ್ಹಗೊಂಡ ಅಭ್ಯರ್ಥಿಗಳಿಗೆ ನಂತರ ಮತ್ತೊಮ್ಮೆ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಗೆ ಅವಕಾಶವನ್ನು ಯಾವುದೇ ಕಾರಣಕ್ಕೂ ನೀಡಲಾಗುವುದಿಲ್ಲ.**

**ದೈಹಿಕ ಪರೀಕ್ಷೆಯಲ್ಲಿ ಅರ್ಹರಾದ ಅಭ್ಯರ್ಥಿಗಳಿಗೆ ಅಧಿಸೂಚನೆಯನ್ವಯ ಪ್ರತಿ ಹುದ್ದೆಗೂ ಪ್ರತ್ಯೇಕವಾಗಿ ಬೇರೆ ಬೇರೆ ದಿನಾಂಕಗಳಂದು ಲಿಖಿತ ಪರೀಕ್ಷೆಯನ್ನು ನಡೆಸಲಾಗುವುದು.**

1. **ಅರ್ಜಿ ಪಡೆಯುವ ಮತ್ತು ಸಲ್ಲಿಸುವ ವಿಧಾನ :** ಐ.ಆರ್.ಬಿ. ಘಟಕದಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಈ ಕೆಳಕಂಡ 09 ಕೇಂದ್ರಗಳಲ್ಲಿ ಅರ್ಜಿಗಳನ್ನು ಮಾರಾಟ ಮಾಡಲಾಗುವುದು. ಅಲ್ಲದೇ ಸದರಿ ಹುದ್ದೆಗಳಿಗೆ ಆನ್–ಲೈನ್ (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರವೂ ಸಹ ಅರ್ಜಿಯನ್ನು ಸಲ್ಲಿಸಬಹುದು.

**ಎ) ಶುಲ್ಕ:**

| ಅಭ್ಯರ್ಥಿಗಳು ಈ ಕೆಳಕಂಡ ವರ್ಗಗಳಿಗೆ ಸೇರಿದವರಾಗಿದ್ದರೆ, ಅದರ ಮುಂದೆ ನಮೂದಿಸಿರುವ ಪರೀಕ್ಷಾ ಶುಲ್ಕವನ್ನು ಪಾವತಿಸುವುದು | ಆನ್‌ಲೈನ್ | ಖುದ್ದಾಗಿ |
|---|---|---|
| ಪ.ಜಾ, ಪ.ಪಂ, ಪ್ರವರ್ಗ–1 | ₹.100/– | ₹.150/– |
| ಇತರೆ | ₹.250/– | ₹.300/– |

**ಟಿಪ್ಪಣಿ:** ಒಮ್ಮೆ ಪರೀಕ್ಷಾ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ನೇಮಕಾತಿ ಸಮಿತಿಯು ನಡೆಸುವ ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಮೇಲಿನ ಕಾಲಂಗಳಲ್ಲಿ ನಮೂದಿಸಿದಂತೆ ಅಭ್ಯರ್ಥಿಗೆ ಅನ್ವಯಿಸುವ ಒಟ್ಟು ಪರೀಕ್ಷಾ ಶುಲ್ಕವನ್ನು **ನಗದು ರೂಪದಲ್ಲಿ ಮಾತ್ರ** ಪಾವತಿಸತಕ್ಕದ್ದು. (ಪಾವತಿಸುವ ವಿವರಗಳನ್ನು ಈ ಕೆಳಗಿನ ಪ್ಯಾರಾದಲ್ಲಿ ಸೂಚಿಸಲಾಗಿದೆ). **ಡಿಡಿ, ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ.**

**ಬಿ) ಆನ್–ಲೈನ್ (On-line) ಮುಖಾಂತರ :**

ಅಭ್ಯರ್ಥಿಗಳು ಆನ್–ಲೈನ್‌ನಲ್ಲಿ ಅರ್ಜಿ ಭರ್ತಿ ಮಾಡಲು ಇಲಾಖೆಯ ಅಧಿಕೃತ ವೆಬ್‌ಸೈಟ್ www.ksp.gov.in ನಲ್ಲಿ Current Recruitment ಮೇಲೆ ಕ್ಲಿಕ್ ಮಾಡಬೇಕು ನಂತರ Recruitment-2012 ಮೇಲೆ ಕ್ಲಿಕ್ ಮಾಡಿ ತದನಂತರ Fresh Application ಮೇಲೆ ಕ್ಲಿಕ್ ಮಾಡಿದಾಗ ವಿವಿಧ ವೃಂದದ ಹುದ್ದೆಗಳು ಪರದೆಯ ಮೇಲೆ ಮೂಡುತ್ತವೆ. ಅವುಗಳಲ್ಲಿ ನೀವು ಆಯ್ಕೆ ಬಯಸುವ ಹುದ್ದೆಯ ಮೇಲೆ ಕ್ಲಿಕ್ ಮಾಡಿ ಅರ್ಜಿ ಭರ್ತಿ ಮಾಡುವುದು. ಭರ್ತಿ ಮಾಡುವ ಮುನ್ನ ಸೂಚನೆಗಳನ್ನು ಪೂರ್ಣವಾಗಿ ತಿಳಿದುಕೊಂಡು ಅಂತಿಮವಾಗಿ 'ನಾನು ಮೇಲ್ಕಂಡ ಸೂಚನೆಗಳನ್ನು ಓದಿರುತ್ತೇನೆ' ಎಂದು ಒಪ್ಪಿಕೊಂಡು ನೀಡಿರುವ ಬಟನ್ ಮೇಲೆ ಕ್ಲಿಕ್ ಮಾಡಿದ ನಂತರ ಸಿಂಧುಗೊಳಿಸುವ ನಮೂನೆ (User Validation Form) ಮೇಲೆ ನೀಡಿರುವ ಕೋಡ್‌ನ್ನು ತುಂಬಬೇಕು.

ನಂತರ ಅರ್ಜಿಯ **ಮೊದಲನೇ ಭಾಗ** ಪರದೆಯ ಮೇಲೆ ಮೂಡುವುದು ಅದರಲ್ಲಿ ಎಲ್ಲಾ ವಿವರಗಳನ್ನು ಭರ್ತಿ ಮಾಡುವುದು, ಅರ್ಜಿಯ ಮೊದಲ ಭಾಗ ಭರ್ತಿ ಮಾಡಿದ ನಂತರ ಅಭ್ಯರ್ಥಿಯು ಅರ್ಜಿಯಲ್ಲಿ ಭರ್ತಿ ಮಾಡಿದ ಎಲ್ಲಾ ವಿವರಗಳು ಪರದೆಯ ಮೇಲೆ ಮೂಡುತ್ತವೆ. ಅಭ್ಯರ್ಥಿಯ ವಿವರಗಳು ಪರದೆ ಮೇಲೆ ಮೂಡಿದ ಕೂಡಲೇ ಎಲ್ಲಾ ವಿವರಗಳನ್ನು ಮತ್ತೊಮ್ಮೆ ಪರಿಶೀಲಿಸಿ, ಏನಾದರೂ ತಪ್ಪುಗಳಾಗಿದ್ದಲ್ಲಿ ಅದನ್ನು ಸರಿಪಡಿಸಲು edit ಮೇಲೆ ಕ್ಲಿಕ್ ಮಾಡಿ ನಂತರ ಅಗತ್ಯ ತಿದ್ದುಪಡಿಗಳನ್ನು ಮಾಡಬಹುದು. **ಅನಂತರ ಅರ್ಜಿಯಲ್ಲಿ ಭರ್ತಿ ಮಾಡಿರುವ ಎಲ್ಲಾ ವಿವರಗಳು ಸರಿಯಾಗಿರುತ್ತವೆಯೆಂದು ಮನದಟ್ಟು ಮಾಡಿಕೊಂಡ ನಂತರ** Generate Challan **ಕ್ಲಿಕ್ ಮಾಡಿ** ನಂತರ Print Challan **ಬಟನ್** ಮೇಲೆ ಕ್ಲಿಕ್ ಮಾಡಿದಾಗ ಶುಲ್ಕ ಪಾವತಿಸಲು ಒಂದು ತ್ರಿಪ್ರತಿ (Triplicate) ಚಲನ್ ತಯಾರಾಗುತ್ತದೆ ಹಾಗೂ ಚಲನ್‌ನಲ್ಲಿ ಅರ್ಜಿ ಸಂಖ್ಯೆಯು ಸೃಜನೆಯಾಗುತ್ತದೆ ಇದನ್ನು ಮುದ್ರಿಸಿಕೊಳ್ಳಬೇಕು. ಆ ಚಲನ್‌ನಲ್ಲಿ ನಮೂದಾಗಿರುವ ಒಟ್ಟು ಪರೀಕ್ಷಾ ಶುಲ್ಕವನ್ನು ನಗದು ರೂಪದಲ್ಲಿಯೇ ಬ್ಯಾಂಕ್ ಚಲನ್ ಮುಖಾಂತರ ಪಾವತಿಸಬೇಕಾಗಿರುತ್ತದೆ. ಪರೀಕ್ಷಾ ಶುಲ್ಕವನ್ನು ಅಧಿಕೃತ SBM/SBH ನಲ್ಲಿ ಮಾತ್ರ ಪಾವತಿಸಬೇಕು (ವೆಬ್‌ಸೈಟ್‌ನಲ್ಲಿ ಅಧಿಕೃತ ಬ್ಯಾಂಕ್‌ಗಳ ಬಗ್ಗೆ ಮಾಹಿತಿ ನೀಡಲಾಗಿದೆ). ಬ್ಯಾಂಕ್‌ನಲ್ಲಿ ಹಣ ಪಾವತಿಸಿದ ನಂತರ ಬ್ಯಾಂಕ್‌ನವರು ಚಲನ್‌ನೊಂದಿಗೆ ಜರ್ನಲ್ ನಂಬರ್ ಹಾಗೂ ದಿನಾಂಕವನ್ನು ನೀಡುವರು.

**ಎರಡನೇ ಭಾಗ** : ಮತ್ತೊಮ್ಮೆ ಇಲಾಖೆಯ ಅಧಿಕೃತ ವೆಬ್‌ಸೈಟ್‌ನಲ್ಲಿ ಹೋಗಿ Complete Applicationನ್ನು ಕ್ಲಿಕ್ ಮಾಡಿ ನೀವು ಅರ್ಜಿ ಸಲ್ಲಿಸುವ ಹುದ್ದೆಯ ಬಟನ್ ಮೇಲೆ ಕ್ಲಿಕ್ ಮಾಡಿದ ನಂತರ ನಿಮ್ಮ ಅರ್ಜಿ ಸಂಖ್ಯೆ. ಮತ್ತು ಜನ್ಮ ದಿನಾಂಕವನ್ನು ಭರ್ತಿ ಮಾಡಿ Submit ಬಟನ್ ಮೇಲೆ ಕ್ಲಿಕ್ ಮಾಡುವುದು. ಅಭ್ಯರ್ಥಿಯು ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಅಭ್ಯರ್ಥಿಯು ಒಂದು ಬಿಳಿ ಹಾಳೆಯ ಮೇಲೆ ಪಾಸ್‌ಪೋರ್ಟ್ ಅಳತೆಯ ಬಣ್ಣದ ಭಾವಚಿತ್ರವನ್ನು ಅಂಟಿಸಿ Scan ಮಾಡುವುದು ಹಾಗೂ ಸಹಿಯನ್ನು ಒಂದು ಬಿಳಿ ಹಾಳೆಯ ಮೇಲೆ ಮಾಡಿ ಅದನ್ನು ಪ್ರತ್ಯೇಕವಾಗಿ Scan ಮಾಡಿಟ್ಟುಕೊಂಡಿರಬೇಕು ಎರಡೂ ಸಹ ಜೆಪಿಜಿ / ಜಿಫ್ ಫಾರ್ಮಾಟ್‌ನಲ್ಲಿ 100 ಕೆ.ಬಿ. ಒಳಗಿರಬೇಕು (Photograph and Signature both should be in jpeg/giff format and less than 100 KB).

Journal number ಮತ್ತು ದಿನಾಂಕವನ್ನು ಪರದೆಯ ಮೇಲೆ ನಮೂದಿಸಬೇಕು. ನಂತರ Scan ಮಾಡಿಟ್ಟುಕೊಂಡಿರುವ ಭಾವಚಿತ್ರ ಮತ್ತು ಸಹಿಯನ್ನು ಕಂಪ್ಯೂಟರ್ ಮುಖೇನ ಭಾವಚಿತ್ರ ಮತ್ತು ಸಹಿಯ ಜಾಗದಲ್ಲಿ ಅಪ್‌ಲೋಡ್ (Upload) ಮಾಡಬೇಕು. ಇಲ್ಲವಾದಲ್ಲಿ ಅಂತಹ ಅರ್ಜಿದಾರರು ಆನ್‌ಲೈನ್‌ನಲ್ಲಿ ಅರ್ಜಿಯನ್ನು ತುಂಬಿ ಮುಂದುವರೆಯಲು ಸಾಧ್ಯವಾಗುವುದಿಲ್ಲ. ಅಭ್ಯರ್ಥಿಗಳು ನೀಡಿರುವ ವಿವರಗಳು ಎಲ್ಲಾ ರೀತಿಯಿಂದಲೂ ಸಮರ್ಪಕವಾಗಿದ್ದು ಅರ್ಹತೆಯನ್ನು ಹೊಂದಿದ್ದಲ್ಲಿ ಮಾತ್ರ ಅರ್ಜಿದಾರರು ಆನ್‌ಲೈನ್‌ನಲ್ಲಿ ಮುಂದುವರೆಯಲು ಸಾಧ್ಯವಾಗುತ್ತದೆ. ಭಾವಚಿತ್ರ ಮತ್ತು ಸಹಿ ಸರಿಯಾಗಿದೆಯೇ ಎಂದು ಪರೀಕ್ಷಿಸಿ ಏನಾದರೂ ತಪ್ಪಿದ್ದಲ್ಲಿ Edit Option ಮೂಲಕ ಸರಿಪಡಿಸತಕ್ಕದ್ದು ನಂತರ ಅಂತಿಮ ಅರ್ಜಿ ಪಡೆಯಲು 'ನಾನು ಒಪ್ಪಿರುತ್ತೇನೆ' '(I Agree)' ಎಂಬುದನ್ನು ಆಯ್ಕೆ ಮಾಡಿ Register Application ಮೇಲೆ ಕ್ಲಿಕ್ ಮಾಡಿ, ನಂತರ Generate Application ಮೇಲೆ ಕ್ಲಿಕ್ ಮಾಡಿದಾಗ ಅರ್ಜಿಯ ಪ್ರತಿ ಮೂಡುತ್ತದೆ. **ಈ ಅರ್ಜಿಯ ಪ್ರತಿಯನ್ನು ಕಡ್ಡಾಯವಾಗಿ ಪ್ರಿಂಟ್ ಮಾಡಿಟ್ಟುಕೊಳ್ಳತಕ್ಕದ್ದು. ಈ ಅರ್ಜಿ ಸಂಖ್ಯೆಯು ಮುಂದಿನ ನೇಮಕಾತಿ ಪ್ರಕ್ರಿಯೆಯ ಎಲ್ಲಾ ಹಂತಗಳಿಗೆ ಅವಶ್ಯಕವಾಗಿರುತ್ತದೆ.**

- ಅರ್ಜಿ ಸಲ್ಲಿಸಲು ಪ್ರಾರಂಭ ದಿನಾಂಕ: 16.01.2012, ಬೆಳಿಗ್ಗೆ 10.00 ಗಂಟೆಗೆ
- ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 15.02.2012, ಸಂಜೆ 6.00 ಗಂಟೆಗೆ
- ಪರೀಕ್ಷಾ ಶುಲ್ಕವನ್ನು ಪಾವತಿಸಲು ಕೊನೆಯ ದಿನಾಂಕ: 16.02.2012 ರಂದು ಅಧಿಕೃತ ಬ್ಯಾಂಕ್ ಕಛೇರಿ ವೇಳೆಯಲ್ಲಿ
- ಶುಲ್ಕ ಪಾವತಿಸಲಾದ Journal Number & Date ನಮೂದಿಸಲು ಕೊನೆಯ ದಿನಾಂಕ: 16.02.2012 ರಂದು ರಾತ್ರಿ 8.00 ಗಂಟೆ ತನಕ

ಪರೀಕ್ಷಾ ಶುಲ್ಕವನ್ನು ನಗದು ರೂಪದಲ್ಲಿ ಪಾವತಿಸುವವರು ಬ್ಯಾಂಕ್‌ನ ಕಛೇರಿಯ ವೇಳೆಯಲ್ಲಿ ಮಾತ್ರ ಪಾವತಿಸತಕ್ಕದ್ದು.

ಸಿ) **ಖುದ್ದಾಗಿ ಅರ್ಜಿ ಪಡೆದು ಸಲ್ಲಿಸುವ ಅಭ್ಯರ್ಥಿಗಳು:**

ಅಭ್ಯರ್ಥಿಗಳು ಈ ಕೆಳಗಿನ ಕಛೇರಿಗಳಲ್ಲಿ ಅರ್ಜಿ ಪಡೆದು ಭರ್ತಿ ಮಾಡಿ ಖುದ್ದಾಗಿ ಸಲ್ಲಿಸುವುದು. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1 ರ ಅಭ್ಯರ್ಥಿಗಳು ಶುಲ್ಕ ₹.150/– ಹಾಗೂ ಇತರೆ ಪ್ರವರ್ಗಕ್ಕೆ ಸೇರಿದ ಎಲ್ಲಾ ಅಭ್ಯರ್ಥಿಗಳು ಶುಲ್ಕ ₹.300/–ಗಳನ್ನು **ನಗದು ರೂಪದಲ್ಲಿ** ಪಾವತಿಸಿ **ದಿನಾಂಕ 16.01.2012 ರಿಂದ 15.02.2012 ರವರೆಗೆ ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 5–00 ಗಂಟೆಯವರೆಗೆ** ಎಲ್ಲಾ ಕೆಲಸದ ದಿನಗಳಂದು (Working Days) ಅರ್ಜಿಯನ್ನು ಈ ಕೆಳಗೆ ನಮೂದಿಸಿರುವ ಕಮಾಂಡೆಂಟ್, ಕೆ.ಎಸ್.ಆರ್.ಪಿ. ಬಟಾಲಿಯನ್ ಕಛೇರಿಗಳಲ್ಲಿ ಪಡೆದುಕೊಳ್ಳಬಹುದಾಗಿದೆ. ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು **ದಿನಾಂಕ 15.02.2012 ರಂದು ಸಾಯಂಕಾಲ 6.00 ಗಂಟೆಯೊಳಗೆ** ಅಥವಾ ಅದಕ್ಕಿಂತ ಮುಂಚಿತವಾಗಿ **ಅರ್ಜಿಯನ್ನು ಖರೀದಿಸಿದ ಕಛೇರಿಯಲ್ಲಿಯೇ** ಸಲ್ಲಿಸತಕ್ಕದ್ದು.

| | | |
|---|---|---|
| ಬೆಂಗಳೂರು | 1 | ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ.ರವರ ಕಛೇರಿ, ನಂ.60, ರಿಚ್ಮಂಡ್ ರಸ್ತೆ, ಬೆಂಗಳೂರು–560 025. |
| | 2 | ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ. ರವರ ಕಛೇರಿ, ಕೋರಮಂಗಲ, 1ನೇ ಬ್ಲಾಕ್, ಬೆಂಗಳೂರು–560 034. |
| | 3 | ಕಮಾಂಡೆಂಟ್, 4ನೇ ಪಡೆ, ಕೆ.ಎಸ್.ಆರ್.ಪಿ. ರವರ ಕಛೇರಿ, ಕೋರಮಂಗಲ, 1ನೇ ಬ್ಲಾಕ್, ಬೆಂಗಳೂರು–560 034. |
| ಬೆಳಗಾಂ | 4 | ಕಮಾಂಡೆಂಟ್, 2ನೇ ಪಡೆ, ಕೆ.ಎಸ್.ಆರ್.ಪಿ. ರವರ ಕಛೇರಿ, ವಿ.ಟಿ.ಯು., ಕ್ಯಾಂಪಸ್, ಪೋಸ್ಟ್ ಮಚ್ಚೆ, ಬೆಳಗಾವಿ–590 018. |
| ಮೈಸೂರು | 5 | ಕಮಾಂಡೆಂಟ್, 5ನೇ ಪಡೆ, ಕೆ.ಎಸ್.ಆರ್.ಪಿ. ರವರ ಕಛೇರಿ, ಲಲಿತ ಮಹಲ್ ರಸ್ತೆ, ಮೈಸೂರು–570 011. |
| ಗುಲ್ಬರ್ಗಾ | 6 | ಕಮಾಂಡೆಂಟ್, 6ನೇ ಪಡೆ, ಕೆ.ಎಸ್.ಆರ್.ಪಿ. ರವರ ಕಛೇರಿ, ತಾಜ್‌ಸುಲ್ತಾನಪೂರ, ಗುಲಬರ್ಗಾ–585 104. |
| ಮಂಗಳೂರು | 7 | ಕಮಾಂಡೆಂಟ್, 7ನೇ ಪಡೆ, ಕೆ.ಎಸ್.ಆರ್.ಪಿ. ರವರ ಕಛೇರಿ, ಅಸೈಗೋಳಿ, ಕೋಣಾಜೆ, ಮಂಗಳೂರು–574 199. |
| ಶಿವಮೊಗ್ಗ | 8 | ಕಮಾಂಡೆಂಟ್, 8ನೇ ಪಡೆ, ಕೆ.ಎಸ್.ಆರ್.ಪಿ. ರವರ ಕಛೇರಿ, ನಿದಿಗೆ ಅಂಚೆ, ಮಾಚೇನಹಳ್ಳಿ, ಶಿವಮೊಗ್ಗ–577 222. |
| ಮುನಿರಾಬಾದ್ | 9 | ಕಮಾಂಡೆಂಟ್, ಇಂಡಿಯಾ ರಿಸರ್ವ್ ಬೆಟಾಲಿಯನ್ ಕಛೇರಿ, ಮುನಿರಾಬಾದ್, ಕೊಪ್ಪಳ (ಜಿಲ್ಲೆ)–583 233. |

**ಸೂಚನೆ:** ಆನ್‌ಲೈನ್ ಅರ್ಜಿ ಅಥವಾ ಮೇಲ್ಕಾಣಿಸಿದ ಕಮಾಂಡೆಂಟ್ ಕಛೇರಿಗಳಿಂದ ಪರೀಕ್ಷಾ ಶುಲ್ಕವನ್ನು ಪಾವತಿಸಿ ಖರೀದಿಸಿದ ಅರ್ಜಿಗಳನ್ನು ಮಾತ್ರ ಸ್ವೀಕರಿಸಲಾಗುವುದು. ಜೆರಾಕ್ಸ್ ಮಾಡಿದ ಇಲ್ಲವೇ ಖಾಸಗಿ ವ್ಯಕ್ತಿಗಳಿಂದ ಕೊಂಡಂತಹ ಅರ್ಜಿಗಳು ಸ್ವೀಕೃತಿಗೆ ಅನರ್ಹವಾಗುತ್ತದೆ. ಕೊರಿಯರ್ / ಪೋಸ್ಟ್ ಮುಖಾಂತರ ಕಳುಹಿಸಲಾಗುವ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಆನ್‌ಲೈನ್ ಮುಖಾಂತರ ಭರ್ತಿ ಮಾಡಿದ ಹಾಗೂ ಖುದ್ದಾಗಿ ಮೇಲೆ ನಮೂದಿಸಿರುವ ಕಛೇರಿಯ ಕೌಂಟರ್‌ನಲ್ಲಿ ನೀಡುವ ಅರ್ಜಿಗಳನ್ನು ಮಾತ್ರ ಸ್ವೀಕರಿಸಲಾಗುವುದು.

**ಡಿ)** ಈ ಕೆಳಗೆ ನಮೂದಿಸಿರುವ ಖಾಲಿ ಹುದ್ದೆಗಳ ಸಂಖ್ಯೆ ತಾತ್ಕಾಲಿಕವಾಗಿದ್ದು, ಅವಶ್ಯಕತೆ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಬದಲಾವಣೆ ಮಾಡಲಾಗುವುದು.

**ಐ.ಆರ್.ಬಿ. ಕಾನ್ಸ್‌ಟೇಬಲ್ (ಪುರುಷ) – 750 ಹುದ್ದೆಗಳು**
**ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ**

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 375 | 94 | 37 | 18 | 19 | 207 |
| ಪರಿಶಿಷ್ಟ ಜಾತಿ | 113 | 29 | 11 | 05 | 05 | 63 |
| ಪರಿಶಿಷ್ಟ ಪಂಗಡ | 23 | 06 | 02 | 01 | 01 | 13 |
| ಪ್ರವರ್ಗ–1 | 30 | 08 | 03 | 01 | 01 | 17 |

| | | | | | | |
|---|---|---|---|---|---|---|
| ಪ್ರವರ್ಗ–2ಎ | 112 | 28 | 11 | 05 | 05 | 63 |
| ಪ್ರವರ್ಗ–2ಬಿ | 30 | 08 | 03 | 01 | 01 | 17 |
| ಪ್ರವರ್ಗ–3ಎ | 30 | 08 | 03 | 01 | 01 | 17 |
| ಪ್ರವರ್ಗ–3ಬಿ | 37 | 10 | 03 | 02 | 02 | 20 |
| **ಒಟ್ಟು** | **750** | **191** | **73** | **34** | **35** | **417** |

**ಟಿಪ್ಪಣಿ :–**

ಗ್ರಾಮೀಣ, ಮಾಜಿ ಸೈನಿಕರು, ಯೋಜನೆಗಳಿಂದ ನಿರಾಶ್ರಿತಗೊಂಡ ಮತ್ತು ಕನ್ನಡ ಮಾಧ್ಯಮ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಅಂತಹ ಖಾಲಿ ಹುದ್ದೆಗಳನ್ನು ಮೇಲೆ ನಮೂದಿಸಿರುವ ಅದೇ ಪ್ರವರ್ಗದ ಇತರರು ಅಭ್ಯರ್ಥಿಗಳಿಂದ ತುಂಬಲಾಗುವುದು.

ಸಹಿ/–
ಅಧ್ಯಕ್ಷರು, ನೇಮಕಾತಿ ಸಮಿತಿ,
ಕೆ.ಎಸ್.ಆರ್.ಪಿ.

**2. ಅರ್ಹತೆಗಳು:**

(ಎ) **ಅರ್ಹತಾ ಷರತ್ತುಗಳು :**

i) ಭಾರತೀಯ ನಾಗರೀಕನಾಗಿರತಕ್ಕದ್ದು.

ii) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ, ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

iii) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತನಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

(ಬಿ) **ವಯೋಮಿತಿ:**

i) **ಸಾಮಾನ್ಯ ಅಭ್ಯರ್ಥಿಗಳಿಗೆ:**

ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಂದರೆ 15.02.2012ಕ್ಕೆ ಅಭ್ಯರ್ಥಿಗೆ ಕನಿಷ್ಟ 18 ವರ್ಷ ವಯಸ್ಸಾಗಿರಬೇಕು ಹಾಗೂ ಈ ಕೆಳಕಂಡ ವಯಸ್ಸು ಮೀರಿರಬಾರದು.

ಅ) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಇತರೆ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ 27 ವರ್ಷಗಳು.

ಆ) ಇತರೆ ಅಭ್ಯರ್ಥಿಗಳಿಗೆ 25 ವರ್ಷಗಳು.

ii) **ಮಾಜಿ ಸೈನಿಕ ಅಭ್ಯರ್ಥಿಗಳಿಗೆ:**

ಮಾಜಿ ಸೈನಿಕ ಅಭ್ಯರ್ಥಿಯು ಸೈನ್ಯ ವಿಯೋಜನೆ, ಸೇವೆಯಿಂದ ತೆಗೆದುಹಾಕಿದ ಹಾಗೂ ಸೇವಾ ನಿವೃತ್ತಿ ಹೊಂದಿದ ಕಾರಣದಿಂದ ಬಿಡುಗಡೆಯಾದ ಮಾಜಿ ಯೋಧರಾಗಿದ್ದಲ್ಲಿ "ಅವರು ಸೇವೆ ಸಲ್ಲಿಸಿದ ಅವಧಿ" ಯ ಜೊತೆಗೆ ಹೆಚ್ಚುವರಿ 03 ವರ್ಷಗಳ ರಿಯಾಯಿತಿಗಳನ್ನು ನೀಡಲಾಗುವುದು. ಮಾಜಿ ಯೋಧ ಎಂಬ ಶಬ್ದವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆಯ ಅರ್ಥ ಹೊಂದಿದೆ.

iii) **ಮಾಜಿ ಸೈನಿಕರ ಬಗ್ಗೆ ವಿವರಣೆ:**

ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯು ದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಾಗಿ) ಸೇವೆ ಸಲ್ಲಿಸಿದ ವ್ಯಕ್ತಿ, ಆದರೆ ಡಿಫೆನ್ಸ್ ಸೆಕ್ಯುರಿಟಿ ಕೋರ್ (Defence Security Corps), ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್ (General Reserved Engineering Force), ಲೋಕ್ ಸಹಾಯಕ್ ಸೇನಾ (Lok Sahayak Sena) ಮತ್ತು ಪ್ಯಾರಾ ಮಿಲಿಟರಿ ದಳ (Para Military Forces) ದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ: ಮತ್ತು

(ಅ) ಅಂತಹ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಲ್ಲಿ ಬಿಡುಗಡೆಯಾದವನು.

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು:

೧. ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.

೨. ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.

೩. ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

**ವಿವರಣೆ:** ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

**ಗಮನಿಸಿ: BSF, CRPF, CISF** ಪಡೆಗಳಿಂದ ನಿವೃತ್ತರಾದವರನ್ನು **'ಮಾಜಿ ಸೈನಿಕ'** ಎಂದು ಪರಿಗಣಿಸಲಾಗುವುದಿಲ್ಲ.

iv) ಭಾರತ ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ.36034/27/84–ಸಿಬ್ಬಂದಿ (ಎಸ್‌ಸಿಟಿ), ದಿನಾಂಕ 02.05.1985 ರನ್ವಯ ಮಾಜಿ ಸೈನಿಕರು ಅವರಿಗೆ ನೀಡಿರುವ ಪ್ರಯೋಜನವಾದ ಪುನರ್ ನೇಮಕವನ್ನು ಉಪಯೋಗಿಸಿಕೊಂಡು ಒಂದು ಬಾರಿ ಸರ್ಕಾರಿ ಹುದ್ದೆಗೆ ಆಯ್ಕೆಯಾದಲ್ಲಿ ಅಂತಹ ಮಾಜಿ ಸೈನಿಕರ ಸ್ಥಾನವು ಸರ್ಕಾರಿ ಉದ್ಯೋಗದ ಪುನರ್ ನೇಮಕಕ್ಕೆ ರದ್ದಾಗುತ್ತದೆ. ಕರ್ನಾಟಕ ಸರ್ಕಾರದ ಪತ್ರ ಸಂಖ್ಯೆ.ಒಇ/90/ಪೊಸಿಅ/2005, ದಿನಾಂಕ 02.02.2006ರ ಪತ್ರದಲ್ಲಿ ದಿನಾಂಕ 02.05.1985ರ ಕೇಂದ್ರ ಸರ್ಕಾರದ ಅಧಿಕೃತ ಜ್ಞಾಪನದಲ್ಲಿನ ಮಾರ್ಗಸೂಚಿಯನ್ವಯ ಕ್ರಮ ಕೈಗೊಳ್ಳುವಂತೆ ಸೂಚಿಸಲಾಗಿರುತ್ತದೆ. ಈ ವಿಷಯದ ಕುರಿತು ವೃಂದ ಮತ್ತು ನೇಮಕಾತಿ ನಿಯಮವಾದ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು, 2009 ರಲ್ಲಿಯೂ ಸಹ ನಿಗಧಿಪಡಿಸಲಾಗಿದೆ. **(ಈ ಕಾರಣದಿಂದ ಮಾಜಿ ಸೈನಿಕರು ಕಡ್ಡಾಯವಾಗಿ ಅರ್ಜಿಯ (OMR) ಕಾಲಂ 8ಎ ಯನ್ನು ಭರ್ತಿ ಮಾಡತಕ್ಕದ್ದು. ಕಾಲಂ 8ಬಿ ಮಾಜಿ ಸೈನಿಕರು ಭೂದಳ/ನೌಕಾದಳ/ವಾಯು ದಳದಲ್ಲಿ ಸೇವೆ ಸಲ್ಲಿಸಿದಷ್ಟು ಅವಧಿಯನ್ನು ಕಡ್ಡಾಯವಾಗಿ ಭರ್ತಿ ಮಾಡತಕ್ಕದ್ದು).**

v) ಈ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕದ ನಂತರ ಯಾವೊಬ್ಬ ಮಾಜಿ ಸೈನಿಕ ಅಭ್ಯರ್ಥಿಯು ಸರ್ಕಾರಿ ನೌಕರಿಯೊಂದಕ್ಕೆ ಮಾಜಿ ಸೈನಿಕ ಮೀಸಲಾತಿ ಪಡೆದು ಸೇರಿದರೆ, ಅಂತಹ ಮಾಜಿ ಸೈನಿಕ ತಾನು ನೌಕರಿ ಸೇರಿದ ಬಗ್ಗೆ ಕೆ.ಎಸ್.ಆರ್.ಪಿ. ನೇಮಕಾತಿ ಸಮಿತಿಗೆ ಮಾಹಿತಿ ನೀಡತಕ್ಕದ್ದು. ಮಾಹಿತಿ ನೀಡದೆ ತದನಂತರ ತಿಳಿದುಬಂದಲ್ಲಿ ಅಂತಹ ಮಾಜಿ ಸೈನಿಕ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ರದ್ದು ಪಡಿಸಲಾಗುವುದು. ಇಂತಹ ಅಭ್ಯರ್ಥಿಯು ಮಾಜಿ ಸೈನಿಕ ಮೀಸಲಾತಿಗೆ ಅನರ್ಹನಾಗುತ್ತಾನೆ.

vi) ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮ 9(1) ರನ್ವಯ ಕೇಂದ್ರ ಸಶಸ್ತ್ರದಳದಲ್ಲಿ ಸೇವೆ ಸಲ್ಲಿಸುವಾಗ ಹತರಾದ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. **(ಓ.ಎಂ.ಆರ್ ಅರ್ಜಿಯ ಕಾಲಂ 8ಸಿ ಯನ್ನು ಭರ್ತಿ ಮಾಡತಕ್ಕದ್ದು).** ಮಾಜಿ ಸೈನಿಕ ಮಕ್ಕಳಿಗೆ ವಯೋಮಿತಿ ಸಡಿಲಿಕೆ, ಸಹಿಷ್ಣುತೆ ಪರೀಕ್ಷೆ ಹಾಗೂ ದೇಹದಾರ್ಢ್ಯತೆ ಪರೀಕ್ಷೆ ಯಲ್ಲಿ ಯಾವುದೇ ತರಹದ ವಿನಾಯಿತಿಯನ್ನು ನೀಡಲಾಗುವುದಿಲ್ಲ. (ಈ ನೇಮಕಾತಿಗೆ ಕೇವಲ ಪುರುಷ ಅಭ್ಯರ್ಥಿಗಳು ಮಾತ್ರ ಅರ್ಹರಾಗಿರುವುದರಿಂದ ಗಂಡು ಮಕ್ಕಳು ಮಾತ್ರ ಅರ್ಜಿ ಸಲ್ಲಿಸುವಂತೆ ತಿಳಿಸಲಾಗಿದೆ). ಕರ್ತವ್ಯ ನಿರ್ವಹಿಸುತ್ತಿದ್ದ ಕೇಂದ್ರ ಸಶಸ್ತ್ರದಳದ ಅಧಿಕಾರಿಗಳಿಂದ ಅವಲಂಬಿತ ಪ್ರಮಾಣ ಪತ್ರ ಮತ್ತು ಸೈನಿಕ ಬೋರ್ಡ್‌ನಿಂದ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

**ಟಿಪ್ಪಣಿ:** ಮಾಜಿ ಸೈನಿಕ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಯಮಾನುಸಾರ ಆ ಮೀಸಲಾತಿಗೆ ಅರ್ಹರೇ? ಎಂಬುದನ್ನು ಹತ್ತಿರದ ಜಿಲ್ಲಾ ಸೈನಿಕ ಬೋರ್ಡ್‌ನಿಂದ ತಿಳಿದುಕೊಂಡು ಮೀಸಲಾತಿಯನ್ನು ಕೋರುವುದು ಸೂಕ್ತ.

**3. ವಿದ್ಯಾರ್ಹತೆ:**

**ಐ.ಆರ್.ಬಿ. ಕಾನ್ಸ್‌ಟೇಬಲ್ ಹುದ್ದೆಗಳಿಗೆ ಸಂಬಂಧಿಸಿದಂತೆ :**

ಎಸ್.ಎಸ್.ಎಲ್.ಸಿ. / 10ನೇ ತರಗತಿ ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ, ಅಂದರೆ 15.02.2012 ಕ್ಕೆ ಹೊಂದಿರಬೇಕು. (ಮಾಜಿ ಸೈನಿಕ ಅಭ್ಯರ್ಥಿಗಳು ವಿದ್ಯಾರ್ಹತೆಯ ಪ್ರಮಾಣ ಪತ್ರವನ್ನು ದಿನಾಂಕ 15.02.2012 ರೊಳಗೆ ಹೊಂದಿದ್ದರೆ ಅಂತಹ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ಮಾತ್ರ ಪರಿಗಣಿಸಲಾಗುವುದು).

**ಟಿಪ್ಪಣಿ:**

i) ಮೇಲೆ ನಮೂದಿಸಿದಂತೆ ವಿದ್ಯಾರ್ಹತೆಯನ್ನು ಹೊಂದದೇ ಇರುವ ಅಭ್ಯರ್ಥಿಗಳು ನೇಮಕಾತಿ ಪ್ರಕ್ರಿಯೆಯಲ್ಲಿ ಭಾಗವಹಿಸಿದರೂ ನಂತರ ನೇಮಕಾತಿ ಸಮಿತಿಗೆ ವಿದ್ಯಾರ್ಹತೆ ಹೊಂದಿರುವುದಿಲ್ಲವೆಂದು ಪತ್ತೆಯಾದಲ್ಲಿ ಅಂತಹ ಅಭ್ಯರ್ಥಿಯ ಅಭ್ಯರ್ಥಿತನವನ್ನು ಯಾವುದೇ ಹಂತದಲ್ಲಾದರೂ ರದ್ದು ಪಡಿಸಲಾಗುವುದು.

ii) ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದಂದು ನಿಗಧಿತ ವಿದ್ಯಾರ್ಹತೆ ಪಡೆಯಲು ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಹರಾಗಿರುವುದಿಲ್ಲ. ಮೇಲಿನ ವಿದ್ಯಾರ್ಹತೆಯನ್ನು ಹೊರತು ಪಡಿಸಿ ಬೇರೆ ಯಾವ ವಿದ್ಯಾರ್ಹತೆಯನ್ನೂ ಪರಿಗಣಿಸಲಾಗುವುದಿಲ್ಲ. ಕೊನೆಯ ದಿನಾಂಕಕ್ಕೆ ಎಲ್ಲಾ ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ./10ನೇ ತರಗತಿ ಅಥವಾ ತತ್ಸಮಾನ ಪರೀಕ್ಷೆಯ ಉತ್ತೀರ್ಣ ಹೊಂದಿದ ಅಂಕಪಟ್ಟಿಯನ್ನು ಹೊಂದಿರಬೇಕು.

**4. ತರಬೇತಿ, ಖಾಯಂಪೂರ್ವ ಅವಧಿ ಮತ್ತು ವೇತನ ಶ್ರೇಣಿ :**

**ಎ) ತರಬೇತಿ:**

ನೇಮಕಾತಿ ಹೊಂದಿದ ಅಭ್ಯರ್ಥಿಗಳು ಡಿಜಿ ಮತ್ತು ಐಜಿಪಿ ರವರು ಕಾಲ ಕಾಲಕ್ಕೆ ನಿರ್ದಿಷ್ಟ ಪಡಿಸಿದ ಮೂಲ ಪೊಲೀಸ್ ತರಬೇತಿಯನ್ನು ಪಡೆಯಬೇಕು. ತರಬೇತಿಯಲ್ಲಿ ನಿಗಧಿಪಡಿಸಿದ ಪರೀಕ್ಷೆಗಳಲ್ಲಿ ಪ್ರಶಿಕ್ಷಣಾರ್ಥಿಯು ಉತ್ತೀರ್ಣರಾಗಬೇಕು. ಅನುತ್ತೀರ್ಣರಾದ ಅಭ್ಯರ್ಥಿಗಳಿಗೆ ಮತ್ತೊಂದು ಅವಕಾಶವನ್ನು ನೀಡಲಾಗುವುದು. ಅದರಲ್ಲಿಯೂ ಅನುತ್ತೀರ್ಣರಾದ ಪ್ರಶಿಕ್ಷಣಾರ್ಥಿಯನ್ನು ಸೇವೆಯಿಂದ ವಜಾಗೊಳಿಸಲಾಗುವುದು.

**ಬಿ) ಖಾಯಂಪೂರ್ವ ಅವಧಿ:**

ನೇರ ನೇಮಕಾತಿ ಮೂಲಕ ಆಯ್ಕೆಗೊಂಡ ಅಭ್ಯರ್ಥಿಗಳು ಚಾಲ್ತಿಯಲ್ಲಿರುವ ನಿಯಮಾನುಸಾರ ಎರಡು ವರ್ಷ ಆರು ತಿಂಗಳು ಖಾಯಂ ಪೂರ್ವ ಅವಧಿಯಲ್ಲಿರುತ್ತಾರೆ.

**ಸಿ) ವೇತನ ಶ್ರೇಣಿ:**

₹.5800–100–6000–125–6500–150–7100–175–7800–200–8600–225–9500–250–10500

**5. ಸಹಿಷ್ಣತೆ ಪರೀಕ್ಷೆ (Endurance Test) ಮತ್ತು ದೇಹದಾರ್ಢ್ಯತೆ ಪರೀಕ್ಷೆ (Physical Standard Test):**

ಎ) ಅಭ್ಯರ್ಥಿಗಳಿಗೆ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯನ್ನು ನೇಮಕಾತಿ ಪ್ರಾಧಿಕಾರವು ನಿಗದಿಪಡಿಸಿದ ಸ್ಥಳದಲ್ಲಿ ನಡೆಸಲಾಗುವುದು. **ಮಾರ್ಚ್ ತಿಂಗಳ ಕೊನೆಯ ವಾರ ಅಥವಾ ಏಪ್ರಿಲ್ ತಿಂಗಳ ಮೊದಲನೇ ವಾರದಲ್ಲಿ** ಈ ಪರೀಕ್ಷೆಗಳನ್ನು ನಡೆಸಲು ಉದ್ದೇಶಿಸಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ಕಳುಹಿಸುವ ಕರೆಪತ್ರದಲ್ಲಿ ಮಾಹಿತಿಯನ್ನು ತಿಳಿಸಲಾಗುವುದು.

ಬಿ) **ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯನ್ನು ನೇಮಕಾತಿ ಪ್ರಾಧಿಕಾರ ನಿಗದಿಪಡಿಸಿದ ಕೇಂದ್ರಗಳಲ್ಲಿ ನಡೆಸಲಾಗುವುದು.**

ಆಯ್ಕೆ ಸಮಿತಿಯು ಯಾವುದೇ ಪರೀಕ್ಷಾ ಕೇಂದ್ರವನ್ನು ರದ್ದುಪಡಿಸುವ ಅಥವಾ ಹೊಸದಾಗಿ ಸೇರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತದೆ ಇದನ್ನು ಕರೆಪತ್ರದಲ್ಲಿ ತಿಳಿಸಲಾಗುವುದು. ಎಲ್ಲಿ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯನ್ನು ನಡೆಸಿದರೂ ಅಭ್ಯರ್ಥಿಗಳು ಸದರಿ ಪರೀಕ್ಷೆಗೆ ಹಾಜರಾಗತಕ್ಕದ್ದು, ಇಲ್ಲದಿದ್ದಲ್ಲಿ ಗೈರುಹಾಜರು/ ಅನರ್ಹಗೊಳಿಸಲಾಗುವುದು.

ಸಿ) **ಒಂದಕ್ಕಿಂತ ಹೆಚ್ಚು ಅರ್ಜಿ ಸಲ್ಲಿಸಿ ಒಂದಕ್ಕಿಂತ ಹೆಚ್ಚು ಕಡೆಗಳಲ್ಲಿ ದೈಹಿಕ ಪರೀಕ್ಷೆಗಳಿಗೆ ಹಾಜರಾದರೆ, ಅಂತಹ ಅಭ್ಯರ್ಥಿಯ ಅಭ್ಯರ್ಥಿತನವನ್ನು ರದ್ದು ಪಡಿಸಲಾಗುವುದು. (ವಿಶೇಷ ಸೂಚನೆಗಳು 13(ಸಿ)ನ್ನು ನೋಡಿ) ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮವಾಗಿರುತ್ತದೆ.**

ಡಿ) ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯನ್ನು ಅರ್ಜಿ ಸಲ್ಲಿಸಲಾದ ಕೇಂದ್ರಗಳಲ್ಲಿಯೇ ನಡೆಸಲಾಗುವುದು.

(ಆಯ್ಕೆ ಸಮಿತಿಯ ಯಾವುದೇ ಪರೀಕ್ಷಾ ಕೇಂದ್ರವನ್ನು ರದ್ದುಪಡಿಸುವ ಅಥವಾ ಹೊಸದಾಗಿ ಸೇರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತದೆ).

ಇ) **ಆನ್‌ಲೈನ್ ಅಭ್ಯರ್ಥಿಗಳಿಗೆ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯ ದಿನಾಂಕ, ಸಮಯ ಮತ್ತು ಸ್ಥಳವನ್ನು ಪ್ರತ್ಯೇಕವಾಗಿ ಅಂಚೆ ಮುಖಾಂತರ ನೀಡಲಾಗುವುದಿಲ್ಲ,** ಆದರೆ ದೈಹಿಕ ಪರೀಕ್ಷೆಯ ಕರೆಪತ್ರವನ್ನು ಈ ಕಛೇರಿಯ ಅಧಿಕೃತ ವೆಬ್‌ಸೈಟ್ www.ksp.gov.in ನಿಂದ ಕಡ್ಡಾಯವಾಗಿ ಪಡೆದುಕೊಳ್ಳತಕ್ಕದ್ದು (Download). ಈ ಸಂಬಂಧ ಆನ್‌ಲೈನ್ ಅಭ್ಯರ್ಥಿಗಳು ಮುಖ್ಯವಾಗಿ ಈ ಕಛೇರಿಯ ಅಧಿಕೃತ ವೆಬ್‌ಸೈಟ್ www.ksp.gov.inನ್ನು ದಿನನಿತ್ಯ ಮೇಲಿಂದ ಮೇಲೆ ಗಮನಿಸುತ್ತಿರುವುದು ಸೂಕ್ತ. ಖುದ್ದಾಗಿ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ಸಹ www.ksp.gov.in ವೆಬ್‌ಸೈಟ್‌ನ್ನು ಗಮನಿಸಲು ಸೂಚಿಸಿದೆ. ಖುದ್ದಾಗಿ ಅರ್ಜಿಗಳನ್ನು ಸಲ್ಲಿಸುವ ಅಭ್ಯರ್ಥಿಗಳಿಗೆ ಕರೆಪತ್ರವನ್ನು ಅಂಚೆ ಮುಖಾಂತರ ಕಳುಹಿಸಲಾಗುವುದು . ದೈಹಿಕ ಪರೀಕ್ಷೆಯು ನಡೆಯುವ ಸಮಯ ಮತ್ತು ಸ್ಥಳವನ್ನು ಸಂಬಂಧಪಟ್ಟ ದೈಹಿಕ ಪರೀಕ್ಷೆಯ ಕೇಂದ್ರಗಳ ಸೂಚನಾ ಫಲಕದಲ್ಲಿಯೂ ಸಹ ಪ್ರಕಟಿಸಲಾಗುವುದು. ಕರೆಪತ್ರವನ್ನು ಪಡೆಯದೆ ಪರೀಕ್ಷೆಗೆ ಹಾಜರಾದಲ್ಲಿ ಅಂತಹವರಿಗೆ ದೈಹಿಕ ಪರೀಕ್ಷೆಯಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದಿಲ್ಲ.

ಖುದ್ದಾಗಿ ಅರ್ಜಿಗಳನ್ನು ಸಲ್ಲಿಸುವ ಹಾಗೂ ಆನ್‌ಲೈನ್ ಮುಖಾಂತರ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಗೆ ಬರುವಾಗ, ಕರೆಪತ್ರದ ಜೊತೆಗೆ ಈ ಕೆಳಕಂಡ ಯಾವುದಾದರೊಂದು ಗುರುತಿನ ಚೀಟಿಯನ್ನು ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು ಮತ್ತು ಅದರ ಒಂದು ದೃಢೀಕೃತ ಪ್ರತಿಯನ್ನು ನೀಡುವುದು.

i) ಪಾಸ್‌ಪೋರ್ಟ್ (Passport)

ii) ಚಾಲನಾ ಪರವಾನಗಿ ಪತ್ರ (Driving License)

iii) ಪ್ಯಾನ್ ಕಾರ್ಡ್ (PAN Card)

iv) ರಾಜ್ಯ ಸರ್ಕಾರ/ ಕೇಂದ್ರ ಸರ್ಕಾರ / ಸಾರ್ವಜನಿಕ ಸ್ವಾಮ್ಯದ ಅಥವಾ ಸರ್ಕಾರದ ಅಧೀನಕ್ಕೊಳಪಟ್ಟ ಖಾಸಗೀ ಕಂಪನಿಗಳು ವಿತರಿಸಿರುವ ಭಾವಚಿತ್ರವಿರುವ ಸೇವಾ ಗುರುತಿನ ಚೀಟಿ (Service ID Card)

v) ಸಾರ್ವಜನಿಕ ಬ್ಯಾಂಕುಗಳು / ಅಂಚೆ ಕಛೇರಿಗಳು ವಿತರಿಸಿರುವ ಭಾವಚಿತ್ರವಿರುವ ಪಾಸ್ ಪುಸ್ತಕ (Bank Pass Book with Photograph)

vi) ಭಾವಚಿತ್ರ ಸಮೇತ ನೋಂದಣಿಯಾಗಿರುವ ಸ್ವತ್ತಿನ ದಾಖಲೆಪತ್ರ ಅಥವಾ ಪಟ್ಟಾ ಪುಸ್ತಕ (Pattas and registered deeds with Photograph)

vii) ಭಾವಚಿತ್ರ ಸಮೇತ ಸಂಬಂಧಪಟ್ಟ ಪ್ರಾಧಿಕಾರಿಯವರು ವಿತರಿಸಿರುವ ಜಾತಿ ಪ್ರಮಾಣ ಪತ್ರ (Community Certificate with Photo)

viii) ಮಾಜಿ ಸೈನಿಕ ಅಭ್ಯರ್ಥಿಗಳಿಗೆ ವಿತರಿಸಿರುವ ಪಿಂಚಣಿ ಪುಸ್ತಕ / ಪಿಂಚಣಿ ಮಂಜೂರಾತಿ ಆಗಿರುವ ಆದೇಶ (Ex-servicemen's pension book/pension payment order)

ix) ಎನ್.ಆರ್.ಇ.ಜಿ.ಎಸ್.ಯಿಂದ ನೀಡಿದ ಭಾವಚಿತ್ರವಿರುವ ಉದ್ಯೋಗ ಚೀಟಿ. (Job cards with Photograph)

x) ಎಲೆಕ್ಟೋರಲ್ ಫೋಟೋ ಗುರುತಿನ ಚೀಟಿ (EPIC).

ಎಫ್) ಕರೆಪತ್ರದ ಜೊತೆಗೆ ಖುದ್ದಾಗಿ ಸಲ್ಲಿಸುವ ಓ.ಎಂ.ಆರ್. ಅರ್ಜಿ ಸ್ವೀಕೃತಿ ಪತ್ರವನ್ನು ಹಾಗೂ ಆನ್‌ಲೈನ್ ಮುಖಾಂತರ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಆನ್‌ಲೈನ್ ಅರ್ಜಿಯ ಜೆರಾಕ್ಸ್ ಪ್ರತಿಯನ್ನು ಸಹ ತರತಕ್ಕದ್ದು, ತಪ್ಪಿದ್ದಲ್ಲಿ ಪರೀಕ್ಷೆಗೆ ಹಾಜರಾಗಲು ಅನುಮತಿ ನೀಡಲಾಗುವುದಿಲ್ಲ. ನಿಗದಿತ ದಿನಾಂಕ ಹಾಗೂ ಸಮಯದಲ್ಲಿ ಹಾಜರಾಗದಿದ್ದರೆ ಅಂತಹವರನ್ನು ಅನರ್ಹ ಗೊಳಿಸಲಾಗುವುದು ಹಾಗೂ ಬದಲಿ ದಿನಾಂಕವನ್ನು ನೀಡಲಾಗುವುದಿಲ್ಲ.

ಜಿ) **ಸಹಿಷ್ಣುತೆ ಪರೀಕ್ಷೆ : (Endurance Test)**

i) ದೇಹದಾರ್ಢ್ಯತೆ ಪರೀಕ್ಷೆಗೆ ಅರ್ಹರಾಗಲು ಅಭ್ಯರ್ಥಿಗಳು ಈ ಕೆಳಗಿನ ಎಲ್ಲಾ ಸಹಿಷ್ಣುತೆ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು ಹಾಗೂ ಈ ಕೆಳಗಿನ ಎಲ್ಲಾ ಸಹಿಷ್ಣುತೆ ಪರೀಕ್ಷೆಗಳನ್ನು ಈ ಕೆಳಗೆ ನಮೂದಿಸಿರುವ ಕ್ರಮದಲ್ಲಿಯೇ ಭಾಗವಹಿಸುವುದು ಕಡ್ಡಾಯವಾಗಿರುತ್ತದೆ. ಈ ಪರೀಕ್ಷೆಗಳಲ್ಲಿ ಭಾಗವಹಿಸುವುದನ್ನು ತಿರಸ್ಕರಿಸುವವರು/ ವಿಫಲವಾಗುವವರು ಅನರ್ಹತೆಗೆ ಒಳಗಾಗುವರು. ಪ್ರತಿಯೊಂದು ಸಹಿಷ್ಣುತೆ ಪರೀಕ್ಷೆ ಮುಗಿದ ನಂತರ ನಿಗದಿತ ನಮೂನೆಗೆ ಅಭ್ಯರ್ಥಿಯು ಭರ್ತಿ ಮಾಡಿರುವ ವಿವರಗಳನ್ನು ಪರಿಶೀಲಿಸಿ ಸಹಿ ಹಾಕಬೇಕು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಯು ಅನರ್ಹತೆಗೊಳಗಾಗುವನು. ಈ ಪರೀಕ್ಷೆಗಳಿಗೆ ಅಂಕಗಳನ್ನು ನೀಡಲಾಗುವುದಿಲ್ಲ. ಇವು ಕೇವಲ ಅರ್ಹತೆಗೆ ಮಾತ್ರ ಸೀಮಿತವಾಗಿರುತ್ತದೆ.

ii) **ಐ.ಆರ್.ಬಿ. ಕಾನ್ಸ್‌ಟೇಬಲ್ (ಪುರುಷ) ಹುದ್ದೆಗೆ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳಿಗೆ ಸಹಿಷ್ಣುತೆ ಪರೀಕ್ಷೆ ಈ ಕೆಳಕಂಡಂತಿರುತ್ತದೆ:**

| **ಸಹಿಷ್ಣುತೆ ಪರೀಕ್ಷೆ** | | |
|---|---|---|
| | **ಅಂಶಗಳು** | **ಅರ್ಹತಾ ವೇಳೆ** |
| ಎಲ್ಲಾ ಸಾಮಾನ್ಯ ಅಭ್ಯರ್ಥಿಗಳಿಗೆ | 2 ಕಿಲೋ ಮೀಟರ್ ಓಟ | 10 ನಿಮಿಷ ಮೀರದಂತೆ |
| | ಉದ್ದ ಜಿಗಿತ<br>ಅಥವಾ<br>ಎತ್ತರ ಜಿಗಿತ | 3.80 ಮೀಟರ್‌ಗಿಂತ ಕಡಿಮೆ ಇಲ್ಲದಂತೆ<br>ಅಥವಾ<br>1.20 ಮೀಟರ್‌ಗಿಂತ ಕಡಿಮೆ ಇಲ್ಲದಂತೆ<br>(3 ಅವಕಾಶಗಳು ಮಾತ್ರ) |
| | ಗುಂಡು ಎಸೆತ (7.26 ಕೆ.ಜಿ.) | 5.60 ಮೀಟರ್‌ಗಿಂತ ಕಡಿಮೆ ಇಲ್ಲದಂತೆ<br>(3 ಅವಕಾಶಗಳು ಮಾತ್ರ) |
| ಮಾಜಿ ಸೈನಿಕ ಅಭ್ಯರ್ಥಿಗಳಿಗೆ | 400 ಮೀಟರ್ ಓಟ | 2 ನಿಮಿಷ ಮೀರದಂತೆ |
| | ಉದ್ದ ಜಿಗಿತ<br>ಅಥವಾ<br>ಎತ್ತರ ಜಿಗಿತ | 2.50 ಮೀಟರ್‌ಗಿಂತ ಕಡಿಮೆ ಇಲ್ಲದಂತೆ<br>ಅಥವಾ<br>0.90 ಮೀಟರ್‌ಗಿಂತ ಕಡಿಮೆ ಇಲ್ಲದಂತೆ<br>(3 ಅವಕಾಶಗಳು ಮಾತ್ರ) |
| | ಗುಂಡು ಎಸೆತ (4 ಕೆ.ಜಿ.) | 3.75 ಮೀಟರ್‌ಗಿಂತ ಕಡಿಮೆ ಇಲ್ಲದಂತೆ<br>(3 ಅವಕಾಶಗಳು ಮಾತ್ರ) |

| **ದೇಹದಾರ್ಢ್ಯತೆ ಪರೀಕ್ಷೆ**<br>**(ಸಹಿಷ್ಣುತೆ ಪರೀಕ್ಷೆಯಲ್ಲಿ ಅರ್ಹಗೊಂಡ ಅಭ್ಯರ್ಥಿಗಳಿಗೆ ಮಾತ್ರ)** | |
|---|---|
| ಎಲ್ಲಾ ಸಾಮಾನ್ಯ ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳಿಗೆ | **ಕನಿಷ್ಠ ಎತ್ತರ** : 170 ಸೆಂ. ಮೀ. ಕಡಿಮೆ ಇಲ್ಲದಂತೆ (ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಅನ್ವಯಿಸುವುದಿಲ್ಲ)<br>**ಎದೆ ಸುತ್ತಳತೆ** : 86 ಸೆಂ. ಮೀ (ಪೂರ್ತಿ ವಿಸ್ತರಿಸಿದಾಗ)<br>ಕನಿಷ್ಠ ವಿಸ್ತರಣೆ 5 ಸೆಂ. ಮೀ. |

**ವಿಶೇಷ ಸೂಚನೆ :-**

**ಸಹಿಷ್ಣುತೆ ಪರೀಕ್ಷೆಗೆ ಹಾಜರಾಗುವ ಮುನ್ನ ಅಭ್ಯರ್ಥಿಗಳು ದೈಹಿಕವಾಗಿ ಸದೃಢರಿರಬೇಕು. ಈ ಪರೀಕ್ಷೆಯ ಸಂದರ್ಭದಲ್ಲಿ ಸಂಭವಿಸುವ ಯಾವುದೇ ರೀತಿಯ ಅನಾಹುತ / ತೊಂದರೆಗಳಿಗೆ ಪೊಲೀಸ್ ಇಲಾಖೆ/ ನೇಮಕಾತಿ ಸಮಿತಿಯು ಜವಾಬ್ದಾರರಾಗಿರುವುದಿಲ್ಲ. ಅಭ್ಯರ್ಥಿಗಳು ಅವರ ಸ್ವಂತ ಹಿತ ದೃಷ್ಟಿಯಿಂದ ಅವರ ದೇಹದ ವೈದ್ಯಕೀಯ ಪರೀಕ್ಷೆಯನ್ನು ಮಾಡಿಸಿಕೊಂಡು, ಅಭ್ಯರ್ಥಿಯ ಆರೋಗ್ಯವು ಎಲ್ಲ ರೀತಿಯಿಂದಲೂ ಸದೃಢವಾಗಿದೆ ಎಂದು ಖಚಿತ ಪಡಿಸಿಕೊಂಡು ಇಲಾಖೆ ನಡೆಸುವ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಗೆ ಎಲ್ಲ ವಿಧದಿಂದಲೂ ಅರ್ಹನೆಂದು ಮುಂಚಿತವಾಗಿಯೇ ತಿಳಿದುಕೊಂಡು ಹಾಜರಾಗತಕ್ಕದ್ದು. ಈ ದಿಸೆಯಲ್ಲಿ ಕನಿಷ್ಠ ಒಂದು ತಿಂಗಳ ಮುಂಚೆಯಿಂದಲೇ ಸಹಿಷ್ಣುತೆ ಪರೀಕ್ಷೆಗೆ ಅಭ್ಯರ್ಥಿಗಳು ಸಾಕಷ್ಟು ಅಭ್ಯಾಸ ಮಾಡಿಕೊಳ್ಳತಕ್ಕದ್ದು.**

ಟಿಪ್ಪಣಿ :

i) ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯನ್ನು ಒಂದು ದೈಹಿಕ ಪರೀಕ್ಷೆಯ ಸಮಿತಿಯು ನಡೆಸುತ್ತದೆ. ಯಾವುದೇ ಇತರೆ ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ಪರಿಗಣಿಸಲಾಗುವುದಿಲ್ಲ ದೈಹಿಕ ಪರೀಕ್ಷೆಯ ಸಮಿತಿಯು ನೀಡುವ ಫಲಿತಾಂಶವೇ ಅಂತಿಮವಾಗಿರುತ್ತದೆ.

ii) ಸಹಿಷ್ಣತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆ ಪೂರ್ಣಗೊಂಡ ನಂತರ ಅಭ್ಯರ್ಥಿಗಳು ದೈಹಿಕ ಪರೀಕ್ಷೆ ಸಮಿತಿ ಸಮ್ಮುಖದಲ್ಲಿ ನಿಗದಿತ ನಮೂನೆಗೆ ಸಹಿ ಮತ್ತು ಎಡಗೈ ಹೆಬ್ಬೆಟ್ಟಿನ ಗುರುತು ಹಾಕಬೇಕು. ಇಲ್ಲವಾದರೆ ಅಂತಹವರನ್ನು ಅನರ್ಹರೆಂದು ಪರಿಗಣಿಸಲಾಗುವುದು.

iii) ಅಭ್ಯರ್ಥಿಗಳು ಸಹಿಷ್ಣುತೆ ಪರೀಕ್ಷೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅರ್ಹಗೊಂಡಲ್ಲಿ ಮಾತ್ರ ಲಿಖಿತ ಪರೀಕ್ಷೆಗೆ ಅರ್ಹಗೊಳ್ಳುವರು.

iv) ಸಹಿಷ್ಣುತೆ ಪರೀಕ್ಷೆಯನ್ನು ಪಾರದರ್ಶಕವಾಗಿ ಹಾಗೂ ನಿಖರತೆಯಾಗಿ ಮಾಡಲು RFID (Radio Frequency Identification) Timing Technology ಯನ್ನು ಉಪಯೋಗಿಸಲಾಗುವುದು.

v) ದೇಹದಾರ್ಢ್ಯತೆ ಪರೀಕ್ಷೆಯ ಎತ್ತರ ಹಾಗೂ ತೂಕವನ್ನು Height-Weight measuring machines ಯಂತ್ರದಿಂದ ಪಡೆಯಲಾಗುವುದು.

vi) ಪಾರದರ್ಶಕತೆಗಾಗಿ ಮೇಲೆ ಹೇಳಿದ ಎಲ್ಲಾ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯನ್ನು ವೀಡಿಯೋಗ್ರಫಿ ಮಾಡಲಾಗುವುದು.

vii) ಮೊದಲನೇ ಪುಟದಲ್ಲಿ ನೀಡಿರುವ ವಿಶೇಷ ಸೂಚನೆಯನ್ನು ಕಟ್ಟುನಿಟ್ಟಾಗಿ ಪಾಲಿಸಲಾಗುವುದು.

**6. ಲಿಖಿತ ಪರೀಕ್ಷೆ:**

ಎ) **ಅಭ್ಯರ್ಥಿಯು ಸಹಿಷ್ಣುತೆ ಹಾಗೂ ದೇಹದಾರ್ಢ್ಯತೆ ಪರೀಕ್ಷೆಗಳಲ್ಲಿ ಉತ್ತೀರ್ಣರಾದರೆ ಮಾತ್ರ ಲಿಖಿತ ಪರೀಕ್ಷೆಗೆ ಕರೆಯಲಾಗುವುದು**. ಅಭ್ಯರ್ಥಿಗಳಿಗೆ ಲಿಖಿತ ಪರೀಕ್ಷೆಯನ್ನು ಈ ಕೆಳಕಂಡ ಕೇಂದ್ರದಲ್ಲಿ ನಡೆಸಲಾಗುವುದು ಆಯ್ಕೆ ಸಮಿತಿಯು ಯಾವುದೇ ಪರೀಕ್ಷಾ ಕೇಂದ್ರವನ್ನು ರದ್ದುಪಡಿಸುವ ಅಥವಾ ಹೊಸದಾಗಿ ಸೇರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತದೆ.

| | | |
|---|---|---|
| 1) ಬೆಂಗಳೂರು | 2) ಮೈಸೂರು | 3) ಮಂಗಳೂರು |
| 4) ಶಿವಮೊಗ್ಗ | 5) ಬೆಳಗಾಂ | 6) ಗುಲ್ಬರ್ಗಾ |
| 7) ಹೊಸಪೇಟೆ (ಮುನಿರಾಬಾದ್ ಬಳಿ) | | |

ಬಿ) ಐ.ಆರ್.ಬಿ. ಕಾನ್ಸ್‌ಟೇಬಲ್ ಹುದ್ದೆಗೆ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳಿಗೆ ಅಂದಾಜು **ಆಗಸ್ಟ್ ಎರಡನೇ ಭಾನುವಾರ ಅಥವಾ ನಂತರದ ಭಾನುವಾರದಲ್ಲಿ** ಈ ಪರೀಕ್ಷೆಯನ್ನು ನಡೆಸಲು ಉದ್ದೇಶಿಸಲಾಗಿದೆ.

ಸಿ) **ಆನ್‌ಲೈನ್ ಅಭ್ಯರ್ಥಿಗಳಿಗೆ ಲಿಖಿತ ಪರೀಕ್ಷೆಯ ದಿನಾಂಕ, ಸಮಯ ಮತ್ತು ಸ್ಥಳವನ್ನು ಪ್ರತ್ಯೇಕವಾಗಿ ಅಂಚೆ ಮುಖಾಂತರ ನೀಡಲಾಗುವುದಿಲ್ಲ,** ಆದರೆ ಲಿಖಿತ ಪರೀಕ್ಷೆಯ ಕರೆಪತ್ರವನ್ನು ಈ ಕಛೇರಿಯ ಅಧಿಕೃತ ವೆಬ್‌ಸೈಟ್ www.ksp.gov.in ನಿಂದ ಕಡ್ಡಾಯವಾಗಿ ಪಡೆದುಕೊಳ್ಳತಕ್ಕದ್ದು (Download). ಈ ಸಂಬಂಧ ಆನ್‌ಲೈನ್ ಅಭ್ಯರ್ಥಿಗಳು ಮುಖ್ಯವಾಗಿ ಈ ಕಛೇರಿಯ ಅಧಿಕೃತ ವೆಬ್‌ಸೈಟ್ www.ksp.gov.in ನ್ನು ದಿನನಿತ್ಯ ಮೇಲಿಂದ ಮೇಲೆ ಗಮನಿಸುತ್ತಿರುವುದು ಸೂಕ್ತ. ಖುದ್ದಾಗಿ ಅರ್ಜಿಗಳನ್ನು ಸಲ್ಲಿಸುವ ಅಭ್ಯರ್ಥಿಗಳಿಗೆ ಕರೆಪತ್ರವನ್ನು ಅಂಚೆ ಮುಖಾಂತರ ಕಳುಹಿಸಲಾಗುವುದು ಹಾಗೂ ವೆಬ್‌ಸೈಟ್‌ನ್ನು ಗಮನಿಸಲು ಸೂಚಿಸಿದೆ. ಲಿಖಿತ ಪರೀಕ್ಷೆಯು ನಡೆಯುವ ಸಮಯ ಮತ್ತು ಸ್ಥಳವನ್ನು ಸಂಬಂಧಪಟ್ಟ ಲಿಖಿತ ಪರೀಕ್ಷೆಯ ಕೇಂದ್ರಗಳ ಸೂಚನಾ ಫಲಕದಲ್ಲಿಯೂ ಸಹ ಪ್ರಕಟಿಸಲಾಗುವುದು. ಕರೆಪತ್ರವನ್ನು ಪಡೆಯದೆ ಪರೀಕ್ಷೆಗೆ ಹಾಜರಾದಲ್ಲಿ ಅಂತಹವರಿಗೆ ಲಿಖಿತ ಪರೀಕ್ಷೆಗೆ ಅವಕಾಶ ನೀಡಲಾಗುವುದಿಲ್ಲ. ಅಭ್ಯರ್ಥಿಗಳು ಲಿಖಿತ ಪರೀಕ್ಷೆಗೆ ಬರುವಾಗ, ಕರೆಪತ್ರದ ಜೊತೆಗೆ ಈ ಕೆಳಕಂಡ ಯಾವುದಾದರೊಂದು ಗುರುತಿನ ಚೀಟಿಯನ್ನು ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು ಮತ್ತು ಒಂದು ದೃಢೀಕೃತ ಪ್ರತಿಯನ್ನು ನೀಡುವುದು.

i) ಪಾಸ್‌ಪೋರ್ಟ್ (Passport)

ii) ಚಾಲನಾ ಪರವಾನಗಿ ಪತ್ರ (Driving License)

iii) ಪ್ಯಾನ್ ಕಾರ್ಡ್ (PAN Card)

iv) ರಾಜ್ಯ ಸರ್ಕಾರ/ ಕೇಂದ್ರ ಸರ್ಕಾರ / ಸಾರ್ವಜನಿಕ ಸ್ವಾಮ್ಯದ ಅಥವಾ ಸರ್ಕಾರದ ಅಧೀನಕ್ಕೊಳಪಟ್ಟ ಖಾಸಗೀ ಕಂಪನಿಗಳು ವಿತರಿಸಿರುವ ಭಾವಚಿತ್ರವಿರುವ ಸೇವಾ ಗುರುತಿನ ಚೀಟಿ (Service ID Card)

v) ಸಾರ್ವಜನಿಕ ಬ್ಯಾಂಕುಗಳು / ಅಂಚೆ ಕಛೇರಿಗಳು ವಿತರಿಸಿರುವ ಭಾವಚಿತ್ರವಿರುವ ಪಾಸ್ ಪುಸ್ತಕ (Bank Pass Book with Photograph)

vi) ಭಾವಚಿತ್ರ ಸಮೇತ ನೋಂದಣಿಯಾಗಿರುವ ಸ್ವತ್ತಿನ ದಾಖಲೆಪತ್ರ ಅಥವಾ ಪಟ್ಟಾ ಪುಸ್ತಕ (Pattas and registered deeds with Photograph)

vii) ಭಾವಚಿತ್ರ ಸಮೇತ ಸಂಬಂಧಪಟ್ಟ ಪ್ರಾಧಿಕಾರಿಯವರು ವಿತರಿಸಿರುವ ಜಾತಿ ಪ್ರಮಾಣ ಪತ್ರ (Community Certificate with Photo)

viii) ಮಾಜಿ ಸೈನಿಕ ಅಭ್ಯರ್ಥಿಗಳಿಗೆ ವಿತರಿಸಿರುವ ಪಿಂಚಣಿ ಪುಸ್ತಕ / ಪಿಂಚಣಿ ಮಂಜೂರಾತಿ ಆಗಿರುವ ಆದೇಶ (Ex-servicemen's pension book/pension payment order)

ix) ಎನ್.ಆರ್.ಇ.ಜಿ.ಎಸ್.ಯಿಂದ ನೀಡಿದ ಭಾವಚಿತ್ರವಿರುವ ಉದ್ಯೋಗ ಚೀಟಿ. (Job cards with Photograph)

x) ಎಲೆಕ್ಟೋರಲ್ ಫೋಟೋ ಗುರುತಿನ ಚೀಟಿ (EPIC).

ಡಿ) ಲಿಖಿತ ಪರೀಕ್ಷೆಗೆ ತರಬೇಕಾದ ದಾಖಲೆಗಳು i) ಲಿಖಿತ ಪರೀಕ್ಷೆಯ ಕರೆಪತ್ರ, ii) ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯ ಫಲಿತಾಂಶ ಹಾಳೆ, iii) ಗುರುತಿನ ಚೀಟಿ, iv) ಖುದ್ದಾಗಿ ಸಲ್ಲಿಸುವ ಓ.ಎಂ.ಆರ್. ಅರ್ಜಿ ಸ್ವೀಕೃತಿ ಪತ್ರ, ಅಥವಾ ಆನ್‌ಲೈನ್ ಅರ್ಜಿಯ ಜೆರಾಕ್ಸ್ ಪ್ರತಿ ತರತಕ್ಕದ್ದು. ತಪ್ಪಿದ್ದಲ್ಲಿ ಲಿಖಿತ ಪರೀಕ್ಷೆಗೆ ಹಾಜರಾಗಲು ಅನುಮತಿ ನೀಡಲಾಗುವುದಿಲ್ಲ.

ಇ) ಐ.ಆರ್.ಬಿ. ಕಾನ್ಸ್‌ಟೇಬಲ್ ಹುದ್ದೆಗಳಿಗೆ ಸಂಬಂಧಿಸಿದಂತೆ ಕನ್ನಡ ಅಥವಾ ಆಂಗ್ಲ ಭಾಷೆಯಲ್ಲಿ 100 ಅಂಕಗಳ ಪ್ರಶ್ನೆಗಳಿರುತ್ತದೆ. ಪ್ರಶ್ನೆಗಳು (1) ಸಾಮಾನ್ಯ ಜ್ಞಾನ ಮತ್ತು (2) ಮಾನಸಿಕ ಸಾಮರ್ಥ್ಯದವುಗಳಾಗಿದ್ದು, ವಸ್ತುನಿಷ್ಠ (ಆಬ್ಜೆಕ್ಟೀವ್) ಮತ್ತು ಬಹುವಿಧ ಆಯ್ಕೆ (Multiple choice) ಮಾದರಿಯದ್ದಾಗಿದ್ದುರುತ್ತದೆ. ಸಾಮಾನ್ಯ ಜ್ಞಾನದಲ್ಲಿ ಸಾಮಾನ್ಯ ಅಧ್ಯಯನ, ವಿಜ್ಞಾನ, ನೀತಿ ಶಿಕ್ಷಣ, ಭೂಗೋಳ, ಆಧುನಿಕ ಭಾರತದ ಇತಿಹಾಸ,

ಭಾರತದ ಸ್ವಾತಂತ್ರ್ಯ ಸಂಗ್ರಾಮ, ಭಾರತದ ಸಂವಿಧಾನ, ಮೂಲಭೂತ ಹಕ್ಕುಗಳು ಮತ್ತು ನಿರ್ದೇಶಾತ್ಮಕ ತತ್ವಗಳು ಒಳಗೊಂಡಿರುತ್ತದೆ. ಸಾಮಾನ್ಯ ಮಾನಸಿಕ ಸಾಮರ್ಥ್ಯದಲ್ಲಿ ಗಣನಾ ಕೌಶಲ್ಯ ಮತ್ತು ಪ್ರಾದೇಶಿಕ ಮನ್ನಣೆ ಕೌಶಲ್ಯಗಳು ಒಳಗೊಂಡಿರುತ್ತದೆ. ಪ್ರತಿ ಸರಿ ಉತ್ತರಕ್ಕೆ 1.00 ಅಂಕಗಳನ್ನು ನೀಡಲಾಗುವುದು. ಪರೀಕ್ಷೆಯ ಅವಧಿಯು ಎರಡು ಗಂಟೆಯದ್ದಾಗಿರುತ್ತದೆ.

ಎಫ್) ಅಭ್ಯರ್ಥಿಗಳು ಈ ವಸ್ತುನಿಷ್ಠ ಲಿಖಿತ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಮತ್ತು ಅವರು ಅರ್ಹತಾ (Qualifying) ಪರೀಕ್ಷೆಯಲ್ಲಿ ಪಡೆದ ಶೇಕಡಾ ಅಂಕಗಳನ್ನೂ ಕೂಡಿಸಿ ಅದರ ಆಧಾರದ ಮೇಲೆ ಅರ್ಹತಾ ಪಟ್ಟಿಯನ್ನು ತಯಾರಿಸಲಾಗುವುದು. ಈ ಅರ್ಹತಾ ಪಟ್ಟಿಯಿಂದ ಪ್ರತಿ ವರ್ಗದಲ್ಲಿ ಅಧಿಸೂಚಿತ ಖಾಲಿ ಇರುವ ಹುದ್ದೆಗಳಿಗೆ ಅನುಗುಣವಾಗಿ ಅರ್ಹ ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗುವುದು. ನಂತರ ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಸ್ಥಾನಪಡೆದ ಅಭ್ಯರ್ಥಿಗಳು ಆಯ್ಕೆ ಸಮಿತಿಯು ನಿಗಧಿಪಡಿಸುವ ವೈದ್ಯಕೀಯ ಮಂಡಳಿಯ ಮುಂದೆ ವೈದ್ಯಕೀಯ ಪರೀಕ್ಷೆಗೆ ಹಾಜರಾಗತಕ್ಕದ್ದು. ಆ ಸಮಯದಲ್ಲಿ ಅರ್ಹರಾದ ಅಭ್ಯರ್ಥಿಗಳ ಮೂಲ ದಾಖಲೆಗಳ ಪರಿಶೀಲನೆ ನಡೆಸಲಾಗುವುದು ಮತ್ತು ಈ ಸಂದರ್ಭದಲ್ಲಿ ಅಭ್ಯರ್ಥಿಗಳು ಗೆಜೆಟೆಡ್ ಅಧಿಕಾರಿಯವರಿಂದ ದೃಢೀಕೃತ ದಾಖಲಾತಿಗಳ ಜೆರಾಕ್ಸ್ ಪ್ರತಿಯ ಒಂದು ಸೆಟ್‌ಅನ್ನು ಸಂಬಂಧಪಟ್ಟ ಕಛೇರಿಗೆ ನೀಡುವುದು. ವೈದ್ಯಕೀಯ ಪರೀಕ್ಷೆಯಲ್ಲಿ ಉತ್ತೀರ್ಣಗೊಂಡ ಅಭ್ಯರ್ಥಿಗಳು ಅಂತಿಮ ಆಯ್ಕೆ ಪಟ್ಟಿಯಲ್ಲಿ ಸ್ಥಾನ ಪಡೆಯುವರು. ಆಯ್ಕೆಯಾದ ಅಭ್ಯರ್ಥಿಗಳ ಗುಣ ಮತ್ತು ನಡತೆ ಹಾಗೂ ಮೂಲ ದಾಖಲಾತಿಗಳ ಪರಿಶೀಲನೆಯ ನಂತರ ಅರ್ಹ ಅಭ್ಯರ್ಥಿಗಳಿಗೆ ನಿಯಮಾನುಸಾರ ನೇಮಕಾತಿ ಆದೇಶ ನೀಡಲಾಗುವುದು.

ಜಿ) **ಸೂಚನೆ:**

i) ಅ) ಪ್ರಶ್ನೆ ಪತ್ರಿಕೆ ವಸ್ತುನಿಷ್ಠ (ಆಬ್ಜೆಕ್ಟೀವ್) ಮಾದರಿಯದಾಗಿದ್ದು, ಅಭ್ಯರ್ಥಿಯು ಸರಿಯಾದ ಉತ್ತರವನ್ನು ಓ.ಎಂ.ಆರ್. ಉತ್ತರ ಪತ್ರಿಕೆಯಲ್ಲಿ ಗುರುತಿಸಬೇಕು.

ಆ) ಪ್ರಶ್ನೆ ಪತ್ರಿಕೆಯಲ್ಲಿನ ಪ್ರಶ್ನೆಗಳಿಗೆ ಉತ್ತರಗಳನ್ನು ಓ.ಎಂ.ಆರ್ ಶೀಟ್‌ನಲ್ಲಿ **ಕಪ್ಪು** ಬಣ್ಣದ ಬಾಲ್‌ಪಾಯಿಂಟ್ ಪೆನ್ನಿನಿಂದ ಮಾತ್ರ ಗುರುತಿಸಬೇಕಾಗುತ್ತದೆ. ನಿಗದಿತ ಜಾಗದಲ್ಲಿ ಪ್ರಶ್ನೆ ಪತ್ರಿಕೆಯ ಶ್ರೇಣಿ (ಎ,ಬಿ,ಸಿ ಇತ್ಯಾದಿ) ಹಾಗೂ ಅಭ್ಯರ್ಥಿಯು ಅರ್ಜಿ ಸಂಖ್ಯೆ, ರೋಲ್ ನಂಬರ್ ಮತ್ತು ಸಹಿಯನ್ನು ತಪ್ಪದೇ ಭರ್ತಿ ಮಾಡಬೇಕು. ಇದನ್ನು ತುಂಬದಿದ್ದರೆ ಉತ್ತರಗಳನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ ಹಾಗೂ ಅಭ್ಯರ್ಥಿ ಆಯ್ಕೆ ಪ್ರಕ್ರಿಯೆಯಿಂದ ಹೊರಹೋಗುತ್ತಾನೆ.

ಇ) ಅಭ್ಯರ್ಥಿಗಳು ಅರ್ಜಿ ಸಂಖ್ಯೆ, ರೋಲ್ ನಂಬರ್ ಇತ್ಯಾದಿ ಭರ್ತಿ ಮಾಡಿದ ನಂತರ ನಿಗದಿತ ಜಾಗದಲ್ಲಿ ತಪ್ಪದೇ ಸಹಿ ಮಾಡಬೇಕು ಮತ್ತು ಎಡಗೈ ಹೆಬ್ಬೆಟ್ಟಿನ ಗುರುತು ಹಾಕಬೇಕು.

ಈ) ಅರ್ಜಿ ಸಂಖ್ಯೆ, ರೋಲ್ ನಂಬರ್ ಇತ್ಯಾದಿಗಳನ್ನು ಭರ್ತಿ ಮಾಡದೆ ಪರೀಕ್ಷೆ ಮುಗಿದ ನಂತರ ಅದನ್ನು ಪರಿಗಣಿಸುವಂತೆ ಕೋರಿದಲ್ಲಿ ಅಂತಹ ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ii) ಅಭ್ಯರ್ಥಿಗಳು ಲಿಖಿತ ಪರೀಕ್ಷೆಗೆ ನಿಗದಿಪಡಿಸಿರುವ ಸಮಯಕ್ಕಿಂತ ಅರ್ಧ ಗಂಟೆ ಮುಂಚಿತವಾಗಿ ಪರೀಕ್ಷಾ ಕೊಠಡಿಯಲ್ಲಿ ಹಾಜರಿರತಕ್ಕದ್ದು, ಆ ಸಮಯದಲ್ಲಿ ಪರೀಕ್ಷಾ ಮೇಲ್ವಿಚಾರಕರು ಉತ್ತರ ಪತ್ರಿಕೆಯನ್ನು ಭರ್ತಿ ಮಾಡುವ ಬಗ್ಗೆ ಕೆಲವು ಮಾರ್ಗ ಸೂಚನೆಗಳನ್ನು ನೀಡುವರು.

iii) ನೇಮಕಾತಿ ಸಮಿತಿಯು ನಡೆಸುವ ಯಾವುದೇ ಪರೀಕ್ಷೆಗಳಲ್ಲಿ ಅನುಚಿತವಾಗಿ ವರ್ತಿಸಿದರೆ ಅಥವಾ ನಕಲು ಮಾಡಿದ್ದು ಕಂಡು ಬಂದರೆ ಅಥವಾ ನಕಲು ಮಾಡುವ ಸಾಮಗ್ರಿಯನ್ನು ಹೊಂದಿದ್ದರೆ, ಅಂತಹ ಅಭ್ಯರ್ಥಿಗಳನ್ನು 3 ವರ್ಷಗಳ ಕಾಲ ಡಿಬಾರ್ ಮಾಡಲಾಗುವುದು ಮತ್ತು ಅವರ ಅಭ್ಯರ್ಥಿತನವನ್ನು ರದ್ದು ಪಡಿಸಲಾಗುವುದು.

iv) ಪರೀಕ್ಷಾ ಕೇಂದ್ರದಲ್ಲಿ ಮೊಬೈಲ್ ಫೋನುಗಳನ್ನು ನಿಷೇಧಿಸಲಾಗಿದೆ. ಪರೀಕ್ಷೆ ಬರೆಯುವಾಗ ಮೊಬೈಲ್ ಫೋನುಗಳನ್ನು ಅಭ್ಯರ್ಥಿಗಳು ಹೊಂದಿದ್ದರೆ ಅವರನ್ನು ಅನರ್ಹಗೊಳಿಸಲಾಗುತ್ತದೆ.

v) ಎಲೆಕ್ಟ್ರಾನಿಕ್ ಸಾಮಗ್ರಿಗಳಾದ ಪೇಜರ್, ಕ್ಯಾಲ್ಕುಲೇಟರ್ ಇತ್ಯಾದಿಗಳನ್ನು ಪರೀಕ್ಷಾ ಕೊಠಡಿಗೆ ತೆಗೆದುಕೊಂಡು ಹೋಗುವುದನ್ನು ನಿಷೇದಿಸಲಾಗಿದೆ.

vi) ಪ್ರಶ್ನೆ ಪತ್ರಿಕೆಯಲ್ಲಿನ ಯಾವುದಾದರು ಪ್ರಶ್ನೆಯ ಬಗ್ಗೆ ಆಕ್ಷೇಪಣೆ ಇದ್ದಲ್ಲಿ. ಪರೀಕ್ಷಾ ಕೇಂದ್ರವನ್ನು ಬಿಡುವ ಮೊದಲು ಆಯಾ ಪರೀಕ್ಷಾ ದಿನವೇ ಸಂಬಂಧಿತ ಪರೀಕ್ಷಾ ಮೇಲ್ವಿಚಾರಕರ ಮುಖಾಂತರ ಅಭ್ಯರ್ಥಿಯ ಅವರ ಹೆಸರು, ವಿಳಾಸ, ನೋಂದಣಿ ಸಂಖ್ಯೆ. ಇತ್ಯಾದಿಗಳನ್ನು ನಮೂದಿಸಿರುವ ಲಿಖಿತ ಮನವಿಯನ್ನು ಪರೀಕ್ಷಾ ಮೇಲ್ವಿಚಾರಕರಿಗೆ ಸಲ್ಲಿಸಿ ಸ್ವೀಕೃತಿ (Acknowledgement) ಪಡೆಯಬೇಕು. ಪರೀಕ್ಷಾ ಕೇಂದ್ರ ಬಿಟ್ಟ ನಂತರ ಕಳುಹಿಸುವ ಯಾವುದೇ ಆಕ್ಷೇಪಣೆಯನ್ನು ಮಾನ್ಯ ಮಾಡಲಾಗುವುದಿಲ್ಲ. ಪ್ರಶ್ನೆ ಪತ್ರಿಕೆಯಲ್ಲಿ ಯಾವುದೇ ದೋಷ ಕಂಡು ಬಂದಲ್ಲಿ ಅದನ್ನು ತಕ್ಷಣ ಮೇಲ್ವಿಚಾರಕರ ಗಮನಕ್ಕೆ ತಂದು ಅದನ್ನು ಸರಿಪಡಿಸಿಕೊಳ್ಳಬೇಕು. ಪರೀಕ್ಷೆ ಮುಗಿದ ನಂತರ ಅದರ ಬಗ್ಗೆ ನೇಮಕಾತಿ ಸಮಿತಿಯ ಗಮನಕ್ಕೆ ತಂದರೆ ಅಂತಹ ಆಕ್ಷೇಪಣೆಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.

**7. ವೈದ್ಯಕೀಯ ಪರೀಕ್ಷೆ :**

ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿದ ನಂತರ ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಸ್ಥಾನ ಪಡೆಯುವ ಎಲ್ಲಾ ಅಭ್ಯರ್ಥಿಗಳು ವೈದ್ಯಕೀಯ ಪರೀಕ್ಷೆಗೆ ನೇಮಕಾತಿ ಸಮಿತಿಯು ರಚಿಸುವ ವೈದ್ಯಕೀಯ ಮಂಡಳಿಯ ಮುಂದೆ ಹಾಜರಾಗತಕ್ಕದ್ದು, ಹಾಜರಾಗುವ ವೇಳೆ ಮತ್ತು ಸ್ಥಳವನ್ನು ನೇಮಕಾತಿ ಪ್ರಾಧಿಕಾರವು ನಿಗಧಿಪಡಿಸುವುದು.

ಆಯ್ಕೆಯಾದ ಅಭ್ಯರ್ಥಿಗಳು ಸಂಬಂಧಪಟ್ಟ ಕಛೇರಿಯಲ್ಲಿ ನಡೆಸುವ ವೈದ್ಯಕೀಯ ಪರೀಕ್ಷೆಗೆ ಹಾಜರಾಗುವಾಗ ಮೂಲ ದಾಖಲೆಗಳೊಂದಿಗೆ ಹಾಜರಾಗುವುದು ಹಾಗೂ ಪತ್ರಾಂಕಿತ (Gazetted) ಅಧಿಕಾರಿಯವರಿಂದ ಮೂಲ ದಾಖಲೆಗಳ ದೃಢೀಕೃತ ಜೆರಾಕ್ಸ್ ಪ್ರತಿಯ ಒಂದು ಸೆಟ್‌ಅನ್ನು ಸಂಬಂಧಪಟ್ಟ ಕಛೇರಿಗೆ ನೀಡುವುದು.

ವೈದ್ಯಕೀಯ ಪರೀಕ್ಷೆಗಳು ಈ ಕೆಳಕಂಡಂತಿರುತ್ತವೆ :

(ಎ) **ದೃಷ್ಟಿ:**

ಕನ್ನಡಕ ಸಹಿತ ಅಥವಾ ಕನ್ನಡಕವಿಲ್ಲದೇ ಕೆಳಗೆ ಕಾಣಿಸಿದ ದರ್ಜೆಯ ಸಮೀಪ ಮತ್ತು ದೂರದ ದೃಷ್ಟಿ ಹೊಂದಿರಬೇಕು.

| | ಉತ್ತಮ | | ಕೆಟ್ಟದಾದ |
|---|---|---|---|
| (i) ದೂರದ ದೃಷ್ಟಿ | 6/9 | ಅಥವಾ | 6/9 |
| | 6/9 | | 6/12 |
| (ii) ಸಮೀಪದ ದೃಷ್ಟಿ | 0/6 | | 0/8 |

(iii) ಪ್ರತಿ ಕಣ್ಣು ಸಂಪೂರ್ಣ ಕ್ಷೇತ್ರ ದೃಷ್ಟಿ ಹೊಂದಿರಬೇಕು.

ವರ್ಣಾಂಧತೆ, ಮೆಳ್ಳಗಣ್ಣು ಅಥವಾ ಯಾವುದೇ ಕಣ್ಣಿನ ಅಥವಾ ರೆಪ್ಪೆಯ ವಿಕೃತ ಸ್ಥಿತಿಯನ್ನು ಅನರ್ಹತೆಯೆಂದು ಪರಿಗಣಿಸಲಾಗುವುದು.

(ಬಿ) **ಶ್ರವಣ ಶಕ್ತಿ:**

i) ರಿನ್ನೇಸ್ ಪರೀಕ್ಷೆ (Rinne's Test) ii) ವೆಬ್ಬರ್ ಪರೀಕ್ಷೆ (Webber's Test)

iii) ವೆರ್ಟಿಗೋ ಪರೀಕ್ಷೆ (Tests for Vertigo)

ಮೇಲಿನ ಪರೀಕ್ಷೆಗಳಲ್ಲಿ ಯಾವುದೇ ನ್ಯೂನತೆಗಳು ಕಂಡು ಬಂದಲ್ಲಿ ಅನರ್ಹತೆ ಎಂದು ಪರಿಗಣಿಸಲಾಗುವುದು.

(ಸಿ) ಈ ಕೆಳಗಿನ ದೈಹಿಕ ಪರೀಕ್ಷೆಗಳಲ್ಲಿ ಯಾವುದೇ ನ್ಯೂನತೆಗಳು ಅನರ್ಹತೆ ಎಂದು ಪರಿಗಣಿಸಲಾಗುವುದು.

i) ತಾಗು ಮಂಡಿ (Knock knees)

ii) ಬಾಗಿದ ಕಾಲುಗಳು (Bow legs)

iii) ಚಪ್ಪಟೆ ಪಾದ (Flat feet)

iv) ಅಪಧಮನಿ ಊತ (Varicose Veins)

v) ಮಾತಿನಲ್ಲಿ ಅಡಚಣೆ (Impediment in speech)

(ಡಿ) ಎದೆಯ ಕ್ಷ–ಕಿರಣ (Chest X-Ray) ವನ್ನು ಪರೀಕ್ಷೆಗೆ ತೆಗೆದುಕೊಳ್ಳಲಾಗುವುದು.

ಮೇಲಿನ ಎಲ್ಲಾ ಪರೀಕ್ಷೆಗಳನ್ನು ವೈದ್ಯಕೀಯ ಮಂಡಳಿಯು ನಡೆಸುತ್ತದೆ. ವೈದ್ಯಕೀಯ ಮಂಡಳಿಯು ದೈಹಿಕವಾಗಿ ಅರ್ಹರೆಂದು ಪ್ರಮಾಣೀಕರಿಸಿದ ಅಭ್ಯರ್ಥಿಗಳು ಮಾತ್ರ ನೇಮಕಾತಿಗೆ ಅರ್ಹಗೊಳ್ಳುವರು/ಅರ್ಹರಾಗುವರು.

ಟಿಪ್ಪಣಿ : ಸಹಿಷ್ಣುತೆ ಪರೀಕ್ಷೆ, ಲಿಖಿತ ಪರೀಕ್ಷೆ ಮತ್ತು ವೈದ್ಯಕೀಯ ಪರೀಕ್ಷೆಗಳಿಗೆ ಹಾಜರಾಗುವ ಅಭ್ಯರ್ಥಿಗಳಿಗೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.

**8. ಜಾತಿ ಮೀಸಲಾತಿ ಪ್ರಮಾಣ ಪತ್ರಗಳು :**

ಜಾತಿ ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಈ ಕೆಳಕಂಡ ನಮೂನೆಗಳಲ್ಲಿ ಪ್ರಮಾಣ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು.

ಎ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶಿಲ್ದಾರ್ ರವರಿಂದ ಪಡೆದ ನಮೂನೆ–ಡಿ ಪ್ರಮಾಣ ಪತ್ರ.

ಬಿ) ಪ್ರವರ್ಗ – 1 ವರ್ಗದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪಡೆದ ನಮೂನೆ–ಇ ಪ್ರಮಾಣ ಪತ್ರ.

ಸಿ) ಪ್ರವರ್ಗ– 2ಎ, 2ಬಿ, 3ಎ, 3ಬಿ ವರ್ಗದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪಡೆದ ನಮೂನೆ – ಎಫ್ ಪ್ರಮಾಣ ಪತ್ರ.

ಸೂಚನೆ : ನಮೂನೆ – ಎಫ್ ಪ್ರಮಾಣ ಪತ್ರವು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕ:

15.02.2012 ಕ್ಕೆ ಐದು ವರ್ಷಕ್ಕಿಂತ ಹಳೆಯದಾಗಿರಬಾರದು.

**9. ಗ್ರಾಮೀಣ ಮೀಸಲಾತಿ:**

ಎ) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಯು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಗ್ರಾಮೀಣ ಪ್ರದೇಶದಲ್ಲಿ ವಿದ್ಯಾಭ್ಯಾಸ ಹೊಂದಿರಬೇಕು, **ಮತ್ತು**

ಬಿ) ಅಭ್ಯರ್ಥಿಯು ವ್ಯಾಸಂಗ ಮಾಡಿದ ಸ್ಥಳವು **ವ್ಯಾಸಂಗ ಮಾಡಿದ ಅವಧಿಯಲ್ಲಿ** ಅಂದಿನ ಕರ್ನಾಟಕ ಪೌರ ನಿಗಮಗಳ ಅಧಿನಿಯಮ 1976ರ ಅಥವಾ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಅಡಿಯಲ್ಲಿ ನಿರ್ದಿಷ್ಟ ಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆಯ ಹಂತದಲ್ಲಿರುವ ಪ್ರದೇಶಗಳ ಹೊರತಾಗಿ ಇತರ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಯಾಗಿರಬೇಕು, **ಮತ್ತು**

ಸಿ) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಯು ಕರ್ನಾಟಕ ಅಧಿಸೂಚನೆ ಸಂಖ್ಯೆ. ಸಿಆಸುಇ:08:ಸೆನೆನಿ:2001, ದಿನಾಂಕ 13.02.2001ರ ಪ್ರಕಾರ ಮೇಲೆ ಪರಿಭಾಷಿಸಿದಂತೆ ತರಗತಿ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಪ್ರದೇಶದಲ್ಲಿ ವಿದ್ಯಾಭ್ಯಾಸ ಹೊಂದಿರುವವರು ಸರ್ಕಾರಿ ಆದೇಶ ಸಂಖ್ಯೆ. ಸಿಆಸುಇ/96/ಸೆನೆನಿ/2005, ದಿನಾಂಕ 10.08.2005ರಲ್ಲಿ ನಿಗಧಿಪಡಿಸಿದ ನಮೂನೆ–2ರ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಶಾಲಾ ಮುಖ್ಯೋಪಾಧ್ಯಾಯರಿಂದ ಸಹಿ ಮಾಡಿಸಿ ಮತ್ತು ವ್ಯಾಪ್ತಿಯ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿದ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆಯುವುದು. ನಮೂನೆ–1 (ನಾನ್–ಕ್ರೀಮಿ ಲೇಯರ್) ಮತ್ತು ನಮೂನೆ–2 ಇವುಗಳು ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ಅಭ್ಯರ್ಥಿಗಳಿಗೆ ಕಡ್ಡಾಯವಾಗಿರುತ್ತದೆ.

ಡಿ) ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಸೇರಿದ ಅಭ್ಯರ್ಥಿಗಳು ನಮೂನೆ–2ರಲ್ಲಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಪಡೆದು ಸಲ್ಲಿಸುವುದು.

**ಸೂಚನೆ:** ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅಂತಹ ಅಭ್ಯರ್ಥಿಗಳು Non-Creamy Layer ಪ್ರಮಾಣ ಪತ್ರವನ್ನು ಹೊಂದಿರದಿದ್ದಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

**10. ಯೋಜನಾ ನಿರಾಶ್ರಿತರು:**

ಯೋಜನಾ ನಿರಾಶ್ರಿತ ಮೀಸಲಾತಿ ಕೋರುವ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ. ಡಿಪಿಎಆರ್:23:ಎಸ್ಆರ್ಆರ್:99, ದಿನಾಂಕ 23.11.2000 ರನ್ವಯ (ಈ ನಿಯಮಗಳು ಜಾರಿಯಾಗುವ 20 ವರ್ಷಕ್ಕೆ ಮುನ್ನ ನಿರ್ವಸಿತರಾದ ಕುಟುಂಬದ ಅಭ್ಯರ್ಥಿಗಳು ಈ ಮೀಸಲಾತಿಗೆ ಅನ್ವಯವಾಗುವುದಿಲ್ಲ) ಸರ್ಕಾರದ ಸುತ್ತೋಲೆ ಸಂಖ್ಯೆ. ಸಿಆಸುಇ:44: ಸೆನೆನಿ:2001, ದಿನಾಂಕ 27.07.2001ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು.

ಸೂಚನೆ: 1) ಈ ಮೇಲಿನ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು ಹಾಗೂ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು.

2) ಅರ್ಜಿಯನ್ನು ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದ ನಂತರ ಮಾಡಿಸುವ ಮೀಸಲಾತಿ ಪ್ರಮಾಣ ಪತ್ರಗಳನ್ನು ಯಾವುದೇ ಹಂತದಲ್ಲಿ ಗಣನೆಗೆ ತೆಗೆದುಕೊಳ್ಳುವುದಿಲ್ಲ.

3) ಈ ಮೇಲೆ ನಮೂದಿಸಿರುವ ಎಲ್ಲಾ ಮೀಸಲಾತಿ ಪ್ರಮಾಣ ಪತ್ರಗಳ ನಮೂನೆಗಳನ್ನು ಅಧಿಸೂಚನೆಯ ಕೊನೆಯಲ್ಲಿ ನೀಡಲಾಗಿರುತ್ತದೆ.

**11. ಕನ್ನಡ ಮಾಧ್ಯಮ:**

ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1 ನೇ ತರಗತಿಯಿಂದ 10 ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

ಅಭ್ಯರ್ಥಿಗಳು ಆನ್‌ಲೈನ್ ಮತ್ತು ಖುದ್ದಾಗಿ ಅರ್ಜಿ ಸಲ್ಲಿಸುವುದರಿಂದ ಯಾವುದೇ ಪ್ರಮಾಣ ಪತ್ರಗಳನ್ನು ಅರ್ಜಿಯೊಂದಿಗೆ ಲಗತ್ತಿಸಲು ಅವಕಾಶ ಇರುವುದಿಲ್ಲ. ಆದರೆ ಈ ಮೇಲಿನ ಪ್ರಮಾಣ ಪತ್ರಗಳನ್ನು/ದಾಖಲೆಗಳನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಅಂದರೆ, ದಿನಾಂಕ: 15.02.2012ರ ಒಳಗೆ ಪಡೆದಿರಬೇಕು ಇಲ್ಲವೇ ಸಿಂಧುವಾಗಿರಬೇಕು, ಹಾಗೂ ನೇಮಕಾತಿ ಸಮಿತಿಯು ಪರಿಶೀಲನೆಗಾಗಿ ಹಾಜರುಪಡಿಸಲು ಸೂಚಿಸಿದಾಗ ಅರ್ಜಿಯಲ್ಲಿ ನಮೂದಿಸಿರುವ ಮೀಸಲಾತಿಯ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಕೆಳಕಂಡಂತೆ ಕ್ರಮ ಕೈಗೊಳ್ಳಲಾಗುವುದು.

ಸೂಚನೆ: 1) ಕಡ್ಡಾಯವಾಗಿ ಹಾಜರು ಪಡಿಸಬೇಕಾದ ವಿದ್ಯಾರ್ಹತೆ/ ಜನ್ಮ ದಿನಾಂಕ ಪ್ರಮಾಣ ಪತ್ರಗಳನ್ನು ಹಾಜರು ಪಡಿಸದಿದ್ದಲ್ಲಿ : ಅಭ್ಯರ್ಥಿಯ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು.

2) ವಿವಿಧ ಮೀಸಲಾತಿ ಕೋರಿ ಹಾಜರು ಪಡಿಸಬೇಕಾದ ಪ್ರಮಾಣ ಪತ್ರಗಳನ್ನು ಹಾಜರು ಪಡಿಸದಿದ್ದಲ್ಲಿ: ಆ ಮೀಸಲಾತಿಯನ್ನು ರದ್ದು ಪಡಿಸಿ ಸಾಮಾನ್ಯ ಅರ್ಹತೆಯಲ್ಲಿ ಅರ್ಹತೆಯನ್ನು ಹೊಂದಿದ್ದಲ್ಲಿ ಮಾತ್ರ, ಸಾಮಾನ್ಯ ಅರ್ಹತೆಯ ಅಭ್ಯರ್ಥಿಯೆಂದು ಪರಿಗಣಿಸಲಾಗುವುದು.

**12. ಪ್ರಮುಖವಾದ ಸೂಚನೆಗಳು :**

ಎ) ಹುಟ್ಟಿದ ದಿನಾಂಕದ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪ್ರಮಾಣ ಪತ್ರ)/ ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತಭಾಗ (Extract of Cumulative Record)

ಬಿ) ಅಭ್ಯರ್ಥಿಗಳು ಓ.ಎಂ.ಆರ್. ಅರ್ಜಿಯನ್ನು ಭರ್ತಿ ಮಾಡುವಾಗ ಅರ್ಜಿಯ ಎಲ್ಲಾ ಕಾಲಂಗಳನ್ನು **ಕಪ್ಪು / ನೀಲಿ** ಬಣ್ಣದ ಬಾಲ್ ಪಾಯಿಂಟ್ ಪೆನ್ನಿನಿಂದ ಮಾತ್ರ ತುಂಬತಕ್ಕದ್ದು. ಅಲ್ಲದೆ, ಮೀಸಲಾತಿಗಳನ್ನು ಕೋರಿದಲ್ಲಿ ಖುದ್ದಾಗಿ ಪಡೆದು ಸಲ್ಲಿಸುವ ಅರ್ಜಿಯಲ್ಲಿ ಮೀಸಲಾತಿಗಾಗಿ ನಿರ್ದಿಷ್ಟಪಡಿಸಿದ ವೃತ್ತಗಳನ್ನು ತುಂಬತಕ್ಕದ್ದು. ಮೀಸಲಾತಿಯ ವೃತ್ತಗಳಲ್ಲಿ ಖಾಲಿ ಬಿಟ್ಟಿರುವ ಅಭ್ಯರ್ಥಿಗಳ ಮೀಸಲಾತಿಯನ್ನು ಸಾಮಾನ್ಯ ಅರ್ಹತೆಯೆಂದು ಪರಿಗಣಿಸಲಾಗುವುದು. ನಿರ್ದಿಷ್ಟವಾದ ವೃತ್ತಗಳಲ್ಲಿ ಮೀಸಲಾತಿಯನ್ನು ನಮೂದಿಸದೆ ಬೇರೆ ಕಡೆ ಗುರುತು (ಶೇಡ್) ಮಾಡಿದ್ದಲ್ಲಿ ಅಂತಹವುಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಅಭ್ಯರ್ಥಿಯು ಅರ್ಜಿಯಲ್ಲಿ ಭರ್ತಿ ಮಾಡಿದ ಮಾಹಿತಿಯು ಅಂತಿಮವಾಗಿರುತ್ತದೆ. ಆದ್ದರಿಂದ ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಜಾಗರೂಕತೆಯಿಂದ ಭರ್ತಿ ಮಾಡುವುದು.

ಸಿ) ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ವಿಳಾಸ ಬದಲಾವಣೆಯಾಗಿದ್ದಲ್ಲಿ ತಕ್ಷಣ ಅಭ್ಯರ್ಥಿಗಳು ಲಿಖಿತ ಮನವಿ ಮೂಲಕ ಸಂಬಂಧಪಟ್ಟ ನೇಮಕಾತಿ ಸಮಿತಿಯ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ನೇಮಕಾತಿ ಸಮಿತಿಯು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ನೇಮಕಾತಿ ಸಮಿತಿಯು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು.

ಡಿ) ಅಭ್ಯರ್ಥಿಗಳು ನೇಮಕಾತಿ ಸಮಿತಿಯೊಡನೆ ಸಂಪರ್ಕಿಸಬೇಕಾದ ಸಂದರ್ಭದಲ್ಲಿ ಅವರ ಮನವಿ ಈ ಕೆಳಕಂಡ ಮಾಹಿತಿಗಳನ್ನು ಒಳಗೊಂಡಿರಬೇಕು.

i) ಅರ್ಜಿಯ ನಕಲು ಪ್ರತಿ.

ii) ಖುದ್ದಾಗಿ ಪಡೆದು ಅರ್ಜಿ ಸಲ್ಲಿಸಿದ ಬಗ್ಗೆ ನೇಮಕಾತಿ ಸಮಿತಿಯ ಕಛೇರಿಯವರು ನೀಡಿದ ಅರ್ಜಿ ಸ್ವೀಕೃತಿ ಪತ್ರದ ನಕಲು ಪ್ರತಿ.

ಇ) ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆ ಹಾಗೂ ಲಿಖಿತ ಪರೀಕ್ಷೆಯ ಹಂತದಲ್ಲಿ ಕೋರಿದ ಘಟಕವನ್ನು ಬದಲಾಯಿಸಲಾಗುವುದಿಲ್ಲ. ಉದಾ: ಒಬ್ಬ ಅಭ್ಯರ್ಥಿಯು ಬೆಂಗಳೂರನ್ನು ಕೋರಿ ಅರ್ಜಿ ಸಲ್ಲಿಸಿ, ಮೈಸೂರಿಗೆ ತನ್ನ ಅಭ್ಯರ್ಥಿತನವನ್ನು ಪರಿಗಣಿಸುವಂತೆ ಕೋರಿದ್ದಲ್ಲಿ ಅದನ್ನು ಪರಿಗಣಿಸಲಾಗುವುದಿಲ್ಲ.

ಎಫ್) ಅಭ್ಯರ್ಥಿಗಳು ಖುದ್ದಾಗಿ ಹಾಗೂ ON-LINE ಮುಖಾಂತರ ಅರ್ಜಿಗಳಲ್ಲಿ ನೀಡುವ ಮಾಹಿತಿಗಳ ಆಧಾರದ ಮೇಲೆ ಅವರುಗಳು ಸ್ಪರ್ಧಾತ್ಮಕ ಪರೀಕ್ಷೆಯನ್ನು ಬರೆಯಲು ಅರ್ಹರೆ ಎಂಬುದನ್ನು ಸಮಿತಿಯು ಪರಿಶೀಲಿಸಿ ಮೇಲು ನೋಟಕ್ಕೆ ಅರ್ಹರೆಂದು ಕಂಡುಬಂದ ಅಭ್ಯರ್ಥಿಗಳಿಗೆ ಮಾತ್ರ ಕರೆ ಪತ್ರಗಳನ್ನು ನೀಡಲಾಗುವುದು. ಆದ್ದರಿಂದ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಮೀಸಲಾತಿ ಇತ್ಯಾದಿಗಳಿಗೆ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ.

ಜಿ) ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸುವ ಮೀಸಲಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ, ಪರೀಕ್ಷಾ ಕೇಂದ್ರ ಹಾಗೂ ವಯೋಮಿತಿ ಸಡಿಲಿಕೆ, ಇತ್ಯಾದಿ ವಿವರಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು ಹಾಗೂ ಈ ಬಗ್ಗೆ ಆನಂತರದಲ್ಲಿ ಬದಲಾವಣೆ ಕುರಿತಂತೆ ಸಲ್ಲಿಸುವ ಯಾವುದೇ ಕೋರಿಕೆ ಪತ್ರಗಳನ್ನು ಪುರಸ್ಕರಿಸಲಾಗುವುದಿಲ್ಲ.

**13. ವಿಶೇಷ ಸೂಚನೆಗಳು :**

ಎ) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಓ.ಎಂ.ಆರ್. ಅರ್ಜಿಯ ಒಂದು ಫೋಟೋ (Xerox) ಪ್ರತಿಯನ್ನು ಮತ್ತು ಆನ್‌ಲೈನ್ ಮುಖಾಂತರ ಸಲ್ಲಿಸಿದ ಅಭ್ಯರ್ಥಿಗಳು ಆನ್‌ಲೈನ್ ಅರ್ಜಿಯ ಜೆರಾಕ್ಸ್ ಪ್ರತಿಯನ್ನು ತಮ್ಮೊಂದಿಗೆ ತಪ್ಪದೇ ಇಟ್ಟುಕೊಳ್ಳಲು ಸೂಚಿಸಿದೆ.

ಬಿ) ಸರ್ಕಾರಿ ಇಲಾಖೆಯಲ್ಲಿ / ರಾಜ್ಯ ಸರ್ಕಾರದ / ಕೇಂದ್ರ ಸರ್ಕಾರದ / ಸರ್ಕಾರದ ಯಾವುದೇ ಪ್ರಾಧಿಕಾರದಲ್ಲಿ/ರಾಜ್ಯ ಅಥವಾ ಕೇಂದ್ರ ಸರ್ಕಾರದ ಸಾರ್ವಜನಿಕ ಸ್ವಾಮ್ಯದ ಕಂಪನಿಗಳಲ್ಲಿ ಪ್ರಸ್ತುತ ಉದ್ಯೋಗಿಯಾಗಿದ್ದಲ್ಲಿ ಅಂತಹವರು ಇಲಾಖಾ ವತಿಯಿಂದ ಕರ್ತವ್ಯದಿಂದ ಬಿಡುಗಡೆ ಮಾಡುವ ಬಗ್ಗೆ ಇಚ್ಛಾ ಅನುಮತಿ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಹಾಗೂ ಅವರ ಸೇವಾ ಪ್ರಮಾಣ ಪತ್ರ ಮತ್ತು ಸದರಿ ಹುದ್ದೆಗೆ ಅರ್ಜಿ ಸಲ್ಲಿಸುವ ಬಗ್ಗೆ ನಿರಾಪೇಕ್ಷಣಾ ಪ್ರಮಾಣ ಪತ್ರವನ್ನು (No Objection Certificate) ಸಂಬಂಧಿತ ಇಲಾಖಾ ಮುಖ್ಯಸ್ಥರಿಂದ ಪಡೆದಿಟ್ಟುಕೊಂಡಿದ್ದು ನೇಮಕಾತಿ ಸಮಿತಿಯು ಸೂಚಿಸಿದಾಗ ಹಾಜರುಪಡಿಸತಕ್ಕದ್ದು.

ಸಿ) **ಅಭ್ಯರ್ಥಿಗಳು ಒಂದು ಹುದ್ದೆಗೆ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಬಾರದೆಂದು ಸಲಹೆ ನೀಡಲಾಗಿದೆ. ಆದರೆ, ಅಭ್ಯರ್ಥಿಗಳು ಒಂದು ಹುದ್ದೆಗೆ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸುವ ಬದಲು ಒಂದೇ ಅರ್ಜಿಯನ್ನು ಪಡೆದು ಅತೀ ಜಾಗರೂಕತೆಯಿಂದ ಮತ್ತು ಬಹಳ ಎಚ್ಚರಿಕೆಯಿಂದ ಭರ್ತಿ ಮಾಡತಕ್ಕದ್ದು, ಏಕೆಂದರೆ ಒಂದಕ್ಕಿಂತ ಹೆಚ್ಚು ನೋಂದಣಿ ಸಂಖ್ಯೆಯಲ್ಲಿ ಪರೀಕ್ಷೆಗೆ ಹಾಜರಾಗಿದ್ದು ಯಾವುದೇ ಹಂತದಲ್ಲಿ ಕಂಡುಬಂದಲ್ಲಿ ಅಂತಹ ಅಭ್ಯರ್ಥಿಯ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು. ಸಂಕ್ಷಿಪ್ತವಾಗಿ ತಿಳಿಸುವುದೆಂದರೆ ಒಬ್ಬ ಅಭ್ಯರ್ಥಿಯು ಒಂದು ನೋಂದಣಿ ಸಂಖ್ಯೆಗಿಂತ ಹೆಚ್ಚು ನೋಂದಣಿ ಸಂಖ್ಯೆಯನ್ನು ಪರೀಕ್ಷೆಯ ಯಾವುದೇ ಹಂತದಲ್ಲಿ ಬಳಸುವುದನ್ನು ನಿಖರವಾಗಿ ನಿಷೇಧಿಸಲಾಗಿದೆ. ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಒಂದೇ ಹೆಸರಿನಲ್ಲಿ ಸಲ್ಲಿಸಿ ಬೇರೆ ಬೇರೆ ಫೋಟೋಗಳನ್ನು ಹಚ್ಚಿ, ಸಹಿಗಳನ್ನು ಮಾಡಿ ಪರೀಕ್ಷೆಗೆ ಹಾಜರಾಗಿದ್ದು ಕಂಡುಬಂದಲ್ಲಿ ಅಂತಹವರ ಎಲ್ಲಾ ಅರ್ಜಿಗಳನ್ನು ತಿರಸ್ಕರಿಸುವುದಲ್ಲದೇ ಅವರ ಮೇಲೆ ಕಾನೂನಿನ ರೀತ್ಯಾ ಕ್ರಮವನ್ನು ಕೈಗೊಳ್ಳಲಾಗುವುದು. ಈ ವಿಚಾರದಲ್ಲಿ ನೇಮಕಾತಿ ಸಮಿತಿಯ ತೀರ್ಮಾನವೇ ಅಂತಿಮವಾಗಿರುತ್ತದೆ.**

ಡಿ) ಅರ್ಹ ಅಭ್ಯರ್ಥಿಗಳು ಮೂಲ ದಾಖಲೆಗಳ ಪರಿಶೀಲನಾ ಸಂದರ್ಭದಲ್ಲಿ ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮಾಹಿತಿಗಳಿಗೆ ಪೂರಕವಾಗಿ ಸದರಿ ದಾಖಲೆ / ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ತಪ್ಪದೇ ಹಾಜರುಪಡಿಸಬೇಕು, ತಪ್ಪಿದ್ದಲ್ಲಿ ಅಂತಹ ಮೀಸಲಾತಿಯನ್ನು ರದ್ದುಪಡಿಸಲಾಗುವುದು. ಹಾಗೂ ಇದರಿಂದ ಆಯ್ಕೆಯಾಗಿರುವ ಅಭ್ಯರ್ಥಿಗಳು ತಮ್ಮ ಅಭ್ಯರ್ಥಿತನವನ್ನು ಸಹ ಕಳೆದುಕೊಳ್ಳಬಹುದು. **ಅರ್ಜಿಯೊಂದಿಗೆ ಯಾವುದೇ ಮೂಲ ಪ್ರಮಾಣ ಪತ್ರಗಳನ್ನು ಹಾಗೂ ಪ್ರತಿಗಳನ್ನು ಸಲ್ಲಿಸುವ ಅಗತ್ಯವಿರುವುದಿಲ್ಲ.** ಒಂದು ವೇಳೆ ಸಲ್ಲಿಸಿ, ಅವು ಕಳೆದು ಹೋದರೆ ನೇಮಕಾತಿ ಸಮಿತಿಯು ಜವಾಬ್ದಾರಿಯಾಗುವುದಿಲ್ಲ.

ಇ) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಅಂದರೆ 15.02.2012 ಕ್ಕೆ ಮೊದಲು ಅಭ್ಯರ್ಥಿಗಳು ಹುದ್ದೆಗೆ ನಿಗದಿಪಡಿಸಿದ ಶೈಕ್ಷಣಿಕ ವಿದ್ಯಾರ್ಹತೆ (ಎಸ್.ಎಸ್.ಎಲ್.ಸಿ./ ತತ್ಸಮಾನ) ಯನ್ನು ಹೊಂದಿರಬೇಕು.

ಎಫ್) ಅಭ್ಯರ್ಥಿಗಳು ನೇಮಕಾತಿ ಸಮಿತಿಯು ನಿಗಧಿಪಡಿಸಿದ ಅರ್ಜಿ ನಮೂನೆಯಲ್ಲಿಯೇ ಅಭ್ಯರ್ಥಿಗಳು ಸ್ವಂತ ಕೈಬರಹದಿಂದ ದುಂಡಗೆ ಎಲ್ಲಾ ಅಂಕಣಗಳನ್ನು ಸ್ಪಷ್ಟವಾಗಿ ಭರ್ತಿ ಮಾಡತಕ್ಕದ್ದು. ಇತರೆ ಯಾವುದೇ ನಮೂನೆಗಳಲ್ಲಿ ಸಲ್ಲಿಸುವ, ಶುಲ್ಕ ಪಾವತಿಸದೆ ಸಲ್ಲಿಸಲ್ಪಡುವ, ಅಪೂರ್ಣವಾಗಿರುವ, ಎಡಗೈ ಹೆಬ್ಬೆಟಿನ ಗುರುತಿಲ್ಲದ ಮತ್ತು ಸಹಿ ಮಾಡದ ಹಾಗೂ ಭಾವಚಿತ್ರ ಇಲ್ಲದೆ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಜಿ) ಅರ್ಜಿಯನ್ನು ಯಾವುದೇ ಸಂದರ್ಭದಲ್ಲಿ ಮಡಚಬಾರದು, ಪಿನ್, ಸ್ಟ್ಯಾಪಲ್ ಮತ್ತು ರಂಧ್ರ ಮಾಡಬಾರದು.

ಹೆಚ್) **ಅಭ್ಯರ್ಥಿಗಳು ಓ.ಎಂ.ಆರ್. ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿ / ವಿವರಗಳ ಆಧಾರದ ಮೇರೆಗೆ ಅವರ ಅರ್ಹತೆಯನ್ನು ಪರಿಗಣಿಸುವುದರಿಂದ ಮತ್ತು ಅಭ್ಯರ್ಥಿಗಳು ಸಲ್ಲಿಸುವ ಅರ್ಜಿಗಳನ್ನು ಸ್ಕ್ಯಾನಿಂಗ್ ಮಾಡಿಸಿ ಗಣಕ ಯಂತ್ರದ ಮುಖೇನ ಅರ್ಹತಾ ಪಟ್ಟಿಯನ್ನು ಸಿದ್ದಪಡಿಸುವುದರಿಂದ, ಅಭ್ಯರ್ಥಿಗಳು ಅರ್ಜಿಗಳನ್ನು ತುಂಬುವಾಗ ಯಾವುದೇ ತಪ್ಪು ಅಥವಾ ಸುಳ್ಳು ಮಾಹಿತಿ ನೀಡಬಾರದು. ತಪ್ಪು ಅಥವಾ ಸುಳ್ಳು ಮಾಹಿತಿ ನೀಡಿದ್ದಲ್ಲಿ ಅದಕ್ಕೆ ಅಭ್ಯರ್ಥಿಗಳೇ ಜವಾಬ್ದಾರರಾಗಿರುತ್ತಾರೆ.**

ಐ) **ಚಿತ್ತು ಅಥವಾ ಹೊಡೆದುಹಾಕುವುದು ಕೂಡ ಮಾಡಬಾರದು. ಹಾಗೇನಾದರೂ ಚಿತ್ತು ಆದಲ್ಲಿ ಹೊಡೆದು ಹಾಕಿದಲ್ಲಿ ಅಥವಾ ಅರ್ಜಿಯನ್ನು ವಿರೂಪಗೊಳಿಸಿದಲ್ಲಿ ಮತ್ತೊಂದು ಅರ್ಜಿ ಪಡೆದು ತುಂಬಿ ಸಲ್ಲಿಸುವುದು ಅವಶ್ಯಕ. ಖರೀದಿಸಿದ ಓ.ಎಂ.ಆರ್. ಅರ್ಜಿಯನ್ನು ಜೆರಾಕ್ಸ್ ಪ್ರತಿ ಮಾಡಿಸಿ, ಮೊದಲು ಜೆರಾಕ್ಸ್ ಪ್ರತಿಯಲ್ಲಿ ಭರ್ತಿಮಾಡಿ, ಅರ್ಜಿಯಲ್ಲಿನ ವಿವರಗಳು ಸರಿಯಾಗಿವೆಯೇ ಎಂದು ಮನಗಂಡು ಆ ನಂತರ ಮೂಲ ಅರ್ಜಿಯನ್ನು ಭರ್ತಿ ಮಾಡುವುದು ಸೂಕ್ತ.**

ಜೆ) ಒಂದು ವೇಳೆ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನದಂದು ಅರ್ಜಿಗಳನ್ನು ಸ್ವೀಕರಿಸಲಾಗುವುದು. ಆದರೆ ವಯೋಮಿತಿ ಹಾಗೂ ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆಯ ಪರಿಗಣನೆಗೆ ದಿನಾಂಕ: 15.02.2012 ಮಾತ್ರ ಅನ್ವಯವಾಗುತ್ತದೆ.

ಕೆ) ಅಭ್ಯರ್ಥಿಯು ಅರ್ಜಿಯನ್ನು ಸಮರ್ಪಕವಾಗಿ ತುಂಬದೇ ಸದರಿ ಅರ್ಜಿ ತಿರಸ್ಕೃತವಾದಲ್ಲಿ ತತ್ಸಂಬಂಧ ಯಾವುದೇ ರೀತಿಯ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

ಎಲ್) ಅಭ್ಯರ್ಥಿಗಳು ತಮ್ಮ ಅರ್ಜಿಗಳಲ್ಲಿ ನೀಡುವ ಮಾಹಿತಿಗಳು ಸರಿ ಇದೆ ಎಂದು ಭಾವಿಸಿ ಅವರುಗಳು ಸ್ಪರ್ಧಾತ್ಮಕ ಪರೀಕ್ಷೆಯನ್ನು ಬರೆಯಲು ಅರ್ಹರೆ ಎಂಬುದನ್ನು ಸ್ಕ್ಯಾನಿಂಗ್ ಮುಖಾಂತರ ಪರಿಗಣಿಸಿ ಅರ್ಹರೆಂದು ಕಂಡುಬಂದ ಅಭ್ಯರ್ಥಿಗಳಿಗೆ ಮಾತ್ರ ಪ್ರವೇಶ ಪತ್ರಗಳನ್ನು ತಯಾರು (Upload) ಮಾಡಲಾಗುತ್ತದೆ. ಆದ್ದರಿಂದ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಮೀಸಲಾತಿ ಇತ್ಯಾದಿಗಳಿಗೂ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ. ಪೂರ್ಣ ಮಾಹಿತಿ ನೀಡದ ಅಥವಾ ತಪ್ಪು ಮಾಹಿತಿ ನೀಡಿದ, ಶುಲ್ಕ ಪಾವತಿಸದ, ಅಭ್ಯರ್ಥಿಯ ಸಹಿ ಇಲ್ಲದ, ಭಾವಚಿತ್ರ ಇಲ್ಲದೆ ಇರುವ ಮತ್ತು ಹೆಬ್ಬೆಟ್ಟಿನ ಗುರುತಿಲ್ಲದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಎಂ) ಪರೀಕ್ಷೆಗೆ ಪ್ರವೇಶವು ಸಂಪೂರ್ಣವಾಗಿ ತಾತ್ಕಾಲಿಕವಾಗಿರುತ್ತದೆ. ಪ್ರವೇಶ ಪತ್ರ ನೀಡಿದ ಮಾತ್ರಕ್ಕೆ ನೇಮಕಾತಿ ಸಮಿತಿಯು ನಿಮ್ಮ ಅಭ್ಯರ್ಥಿತನವನ್ನು ಅಂಗೀಕರಿಸಿದೆ ಎಂದು ಭಾವಿಸತಕ್ಕದ್ದಲ್ಲ.

ಎನ್) ಪ್ರಶ್ನೆ ಪತ್ರಿಕೆಯಲ್ಲಿ ಯಾವುದಾದರೂ ಮುದ್ರಣ ದೋಷವಾದಲ್ಲಿ ಅದನ್ನು ತಕ್ಷಣ ಕೊಠಡಿಯ ಪರಿವೀಕ್ಷಕ ರವರ ಗಮನಕ್ಕೆ ತಂದು ಸರಿಯಾದ ಪ್ರಶ್ನೆ ಪತ್ರಿಕೆ ಪಡೆದುಕೊಂಡು ಉತ್ತರವನ್ನು ಬರೆಯಬೇಕು. ಅಲ್ಲದೇ ಇದರ ಬಗ್ಗೆ ಪರೀಕ್ಷೆ ಮುಗಿದ ನಂತರ ನೇಮಕಾತಿ ಸಮಿತಿಗೆ ಸದರಿ ವಿಷಯದ ಬಗ್ಗೆ ತಿಳಿಸಿದಲ್ಲಿ ಅದನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.

**ಒ) ಉತ್ತರ ಪತ್ರಿಕೆಯನ್ನು ಸ್ಕ್ಯಾನಿಂಗ್ ಮಾಡಿಸಿ ಗಣಕ ಯಂತ್ರದ ಮುಖೇನ ಅರ್ಹತಾ ಪಟ್ಟಿಯನ್ನು ಸಿದ್ದಪಡಿಸುವುದರಿಂದ ಅಭ್ಯರ್ಥಿಗಳು ಉತ್ತರ ಪತ್ರಿಕೆಯ ಮಾಹಿತಿಯನ್ನು ಭರ್ತಿ ಮಾಡುವ ಸಲುವಾಗಿ ಪರೀಕ್ಷೆಗೆ ನಿಗದಿಪಡಿಸಿರುವ ಸಮಯಕ್ಕಿಂತ ಅರ್ಧ ಗಂಟೆ ಮುಂಚಿತವಾಗಿ ಪರೀಕ್ಷಾ ಕೊಠಡಿಗೆ ತಪ್ಪದೇ ಹಾಜರಾಗತಕ್ಕದ್ದು. ಆ ಸಮಯದಲ್ಲಿ ಪರೀಕ್ಷಾ ಮೇಲ್ವಿಚಾರಕರು ಕೆಲವು ಮಾರ್ಗ ಸೂಚನೆಗಳನ್ನು ನೀಡುತ್ತಾರೆ.**

ಪಿ) ಪರೀಕ್ಷೆ ಮುಗಿದ ಒಂದು ಅಥವಾ ಎರಡು ದಿನಗಳ ನಂತರ Provisional Answer Key ಉತ್ತರಗಳನ್ನು ವೆಬ್‌ಸೈಟ್ ನಲ್ಲಿ ಹಾಗೂ ಸಂಬಂಧಪಟ್ಟ ಘಟಕಗಳಲ್ಲಿ ಪ್ರಕಟಿಸಲಾಗುವುದು. ಅಭ್ಯರ್ಥಿಗಳು ಉತ್ತರಗಳ ಬಗ್ಗೆ ಏನಾದರೂ ಆಕ್ಷೇಪಣೆಗಳು ಇದಲ್ಲಿ ಅದಕ್ಕೆ ಒಂದು ವಾರದ ಕಾಲಾವಕಾಶವನ್ನು ನೀಡಲಾಗುವುದು. ಆಕ್ಷೇಪಣೆಗಳು ಬಂದ ನಂತರ ಅದನ್ನು ಒಂದು ನುರಿತ ಕಮಿಟಿಗೆ ನೀಡಿ ಅವರಿಂದ ಸರಿಯಾದ ಉತ್ತರಗಳನ್ನು ಪಡೆದು Final Answer Key ಯನ್ನು ಪ್ರಕಟಿಸಲಾಗುವುದು ಮತ್ತು ಈ ಅಂತಿಮ ಉತ್ತರ ಕೀಗಳ ಪ್ರಕಾರ ಉತ್ತರ ಪತ್ರಿಕೆಯನ್ನು ಮೌಲ್ಯಮಾಪನ ಮಾಡಲಾಗುವುದು. ಅಂತಿಮ ಉತ್ತರ ಕೀ (Final Answer Key) ಗಳನ್ನು ಪ್ರಕಟಿಸಿದ ನಂತರ ಯಾವುದೇ ಆಕ್ಷೇಪಣೆಗಳನ್ನು ಪುರಸ್ಕರಿಸಲಾಗುವುದಿಲ್ಲ.

ಕ್ಯೂ) ಕರ್ನಾಟಕ ರಾಜ್ಯದ, ಕೇಂದ್ರ ಸರ್ಕಾರದ ಯಾವುದೇ ಸರ್ಕಾರಿ ಹಾಗೂ ಅರೆ ಸರ್ಕಾರಿ ಸಂಸ್ಥೆಯ ಸೇವೆಯಿಂದ ವಜಾ ಗೊಂಡಿರುವ ನೌಕರರು ನೇಮಕಾತಿಗೆ ಅರ್ಹರಲ್ಲ.

ಆರ್) ಸುಳ್ಳು ಮಾಹಿತಿ ಅಥವಾ ನಕಲಿ ಪ್ರಮಾಣ ಪತ್ರ / ದಾಖಲೆಗಳನ್ನು ಸಲ್ಲಿಸಿ ನೌಕರಿ ಪಡೆಯುವುದು ಯಾವುದೇ ಸಂದರ್ಭದಲ್ಲಿ ಕಂಡು ಬಂದಲ್ಲಿ, ಅದೇ ಹಂತದಲ್ಲಿ ಅವರನ್ನು ಯಾವುದೇ ಮುನ್ಸೂಚನೆ ನೀಡದೆ ಅವರ ಅಭ್ಯರ್ಥಿತನವನ್ನು ರದ್ದುಗೊಳಿಸುವುದರ ಜೊತೆಗೆ ಅವರ ವಿರುದ್ಧ ಕಾನೂನು ರೀತಿಯ ಕ್ರಮ ತೆಗೆದುಕೊಳ್ಳಲಾಗುವುದು.

ಎಸ್) ಅಭ್ಯರ್ಥಿಯು ಹುದ್ದೆಗೆ ಅರ್ಜಿ ಸಲ್ಲಿಸಿದ ತಕ್ಷಣ ತಾನು ನಿಯಮ ಮತ್ತು ವಿನಿಯಮಗಳಿಗೆ (Rules & Regulations) ಬದ್ಧನಾಗಿರುತ್ತಾನೆ ಎಂದು ಭಾವಿಸಲಾಗಿರುತ್ತದೆ. ಒಂದು ವೇಳೆ ತಾನು ಸದರಿ ಹುದ್ದೆಗೆ ಆಯ್ಕೆಯಾಗದ ಪಕ್ಷದಲ್ಲಿ ತದನಂತರ ಅದೇ ನಿಯಮಗಳನ್ನು ಪ್ರಶ್ನಿಸಲು ಬರುವುದಿಲ್ಲ.

ಟಿ) ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳು 1977ರಲ್ಲಿ ಹಾಗೂ ಸದರಿ ನಿಯಮಕ್ಕೆ ಕಾಲಕಾಲಕ್ಕೆ ಆಗುವ ತಿದ್ದುಪಡಿಗಳ ಅನುಸಾರ ನಿರ್ದಿಷ್ಟಗೊಳಿಸಿರುವಂತೆ ಆಯ್ಕೆಯಾದ ಅಭ್ಯರ್ಥಿಯು ನೇಮಕಾತಿ ಆದೇಶ ನೀಡುವ ಮುನ್ನ ಪೂರ್ಣ ಪ್ರಮಾಣದ ವೈದ್ಯಕೀಯ ಪರೀಕ್ಷೆಗೆ ಒಳಗಾಗಬೇಕಾಗುತ್ತದೆ. ವೈದ್ಯಕೀಯ ಪರೀಕ್ಷೆಯಲ್ಲಿ ವಿಫಲರಾದ ಅಭ್ಯರ್ಥಿಗಳನ್ನು ಅನರ್ಹ ಗೊಳಿಸಲಾಗುವುದು.

**ಯು) ದುರ್ನಡತೆ** : ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆ ಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ

